# ಕಾಗೋಡು ಚಳವಳಿ

ರಚನೆ ಹಾಗೂ ಸಂಗ್ರಹ
ಕೂಡ್ಲಿಗೆರೆ ಮಲ್ಲಿಕಾರ್ಜುನ
ಶಿವಮೊಗ್ಗ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ,
ವಿಧಾನಸೌಧ, ಬೆಂಗಳೂರು - 560 001

ಕಾಗೋಡು ಚಳವಳಿ
ರಚನೆ - ಕೂಡ್ಲಿಗೆರೆ ಮಲ್ಲಿಕಾರ್ಜುನ (ಎಂ.ಸಿ. ಮಲ್ಲಿಕಾರ್ಜುನ) ಪತ್ರಕರ್ತರು :
ಪ್ರಕಟಣೆ : ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ,
ವಿಧಾನಸೌಧ, ಬೆಂಗಳೂರು.

ಪುಟ ಸಂಖ್ಯೆ : 132 + 10
ಬೆಲೆ : ರೂ. 15/-

ಮೊದಲನೆ ಮುದ್ರಣ : ಜನವರಿ 2005
ಪ್ರತಿಗಳು : 2000
ಮುಖಪುಟ ಪರಿಕಲ್ಪನೆ : ಕೂಡ್ಲಿಗೆರೆ ಮಲ್ಲಿಕಾರ್ಜುನ
ಮುಖಪುಟದ ಚಿತ್ರಗಳು : ಕಾಗೋಡು ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದ ಸಮಾಜವಾದಿ ಡಾ. ರಾಮಮನೋಹರ ಲೋಹಿಯಾ, ಶಾಂತವೇರಿ ಗೋಪಾಲಗೌಡರು, ಚಳವಳಿಯ ರೂವಾರಿ ಗಣಪತಿಯಪ್ಪ ಪ್ರತಿಭಟನೆ ನಡೆಸುತ್ತಿರುವ ರೈತರ ಚಿತ್ರಗಳನ್ನು ಕಾಣಬಹುದಾಗಿದೆ.
ಮುದ್ರಣ :
ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಬೆಂಗಳೂರು

**KAGOODU CHALAVALI** : Written by Kudiligere Mallikarjuna (M.C. Mallikarjuna), Journalist & Author, Published by Karnataka Legislature Library Committee, Vidhana Soudha, Bangalore-1.
Pages : 132 + 10
Price : Rs. 15/-

**First Edition :** January - 2005
**Number of Copies :** 2000
**Printed At :** Director,
Government Printing Press, Bangalore.
**Cover Page Concept by :** Kudligere Mallikarjuna

# ಪರಿವಿಡಿ

## ಭಾಗ : ಒಂದು



## ಭಾಗ : ಎರಡು



## ಭಾಗ : ಮೂರು

# ಪೀಠಿಕೆ

ನಾಡಿನಲ್ಲಾದ ಸಾಂಸ್ಕೃತಿಕ ಬದಲಾವಣೆ, ಜನಸಾಮಾನ್ಯರ ಜ್ಞಾನದ ಕ್ಷಿತಿಜವಾಗಿ ರೂಪಗೊಂಡಿದ್ದು ಕಾಗೋಡು ಚಳವಳಿಯ ವಿಶೇಷ. ಈ ಚಳವಳಿ ಸಮಾಜವಾದಿ ನಾಯಕರಿಗೆ ಗಟ್ಟಿ ನಲೆಗಟ್ಟನ್ನು ಒದಗಿಸಿಕೊಟ್ಟಿದೆ. ಇಂತಹ ಮಹತ್ವಯುತವಾದ ಚಳವಳಿಯನ್ನು ಸ್ಮರಿಸುವುದು ಮತ್ತು ದಾಖಲಿಸುವುದು ನಮ್ಮ ಕರ್ತವ್ಯ. ಇದರೊಂದಿಗೆ ಈ ಪ್ರಾಂತ್ಯದ ಮಹತ್ವ, ಚಳವಳಿಯಲ್ಲಾದ ಜೀವನ ಸಂದೇಶ, ದೇಶ ಸೇವೆ, ಜನಹಿತ ಕಾರ್ಯಗಳಿಗೆ ತೊಡಗಿಸಿಕೊಂಡ ಕ್ರಮವನ್ನು ಈ ಚಳವಳಿ ಕಟ್ಟಿಕೊಡುತ್ತದೆ. ಗೇಣಿದಾರರ ಸಮುದಾಯದ ಪ್ರಜ್ಞಾಸ್ಥರದ ಅರಿವಾಗಿ ರೂಪ ಗೊಂಡಿರುವುದು ಈ ಚಳವಳಿಯ ವಿಶೇಷವಾಗಿದೆ. ಈ ಅರಿವಿನ ಪ್ರಜ್ಞಾಸ್ತರವು ಇಂದಿನ ಮತ್ತು ಮುಂದಿನ ಜನಾಂಗಕ್ಕೆ ದಾರಿ ದೀಪವಾಗಲಿ ಎಂಬುದು ನಮ್ಮ ಆಶಯ.

ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಯು ಶ್ರೀ ಬಿ. ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ವಿಧಾನಮಂಡಲದ ಕಲಾಪಗಳ ವರದಿ ಮಾಡುವ ಅನುಭವಿ ಪತ್ರಕರ್ತರನ್ನು ಹಾಗೂ ಲೇಖಕರನ್ನು ಈ ಮಾಲಿಕೆಗಾಗಿ ಬರೆಯುವಂತೆ ಮನವಿ ಮಾಡಿಕೊಂಡಿತು. ಇದಕ್ಕೆ ಒಳ್ಳೆಯ ಪ್ರತಿಕ್ರಿಯೆ ಸಹಿತ ಸಿಕ್ಕಿದೆ. ಸಂಸದೀಯ ಪಟುಗಳ ಸೇವೆಯನ್ನು ಸಮೀಪದಿಂದ ವೀಕ್ಷಿಸುವ ವರದಿಗಾರರ ಲೇಖನ ಹೆಚ್ಚು ಪ್ರಭಾವಶಾಲಿ ಮತ್ತು ಆಕರ್ಷಕ ಅಂಶಗಳಿಂದ ಕೂಡಿರುವುದು ಸಹಜ.

ವಿಧಾನಸಭೆ ಮತ್ತು ವಿಧಾನಪರಿಷತ್ತಿನಲ್ಲಿ ಕಾಗೋಡು ಚಳವಳಿ ಕುರಿತಂತೆ ಅನೇಕ ಬಾರಿ ಚರ್ಚೆಯಾಗಿದೆ. ರಾಜ್ಯದಲ್ಲಿ ಭೂಶಾಸನ ಜಾರಿಯಾದ ಹಿನ್ನೆಲೆಯಲ್ಲಿ ಈ ಕೃತಿ ಮಹತ್ವಪೂರ್ಣ ಎನಿಸುತ್ತದೆ. ಕಾಗೋಡು ಚಳವಳಿಯ ಬಗೆಗೆ ಪುಸ್ತಕ ಬರೆಯಲು ಶಿವಮೊಗ್ಗ ಜಿಲ್ಲೆಯವರೇ ಆದ ಕೂಡ್ಲಿಗೆರೆ ಮಲ್ಲಿಕಾರ್ಜುನವರನವನ್ನು ನಿಯೋಜಿಸಲಾಯಿತು. ಪತ್ರಕರ್ತರಾಗಿ ವಿಧಾನಮಂಡಲದ ವರದಿ ಮಾಡಿದ ಅನುಭವ ಹೊಂದಿದ್ದಾರೆ. ಕಾಗೋಡು ಚಳವಳಿ ಕುರಿತಂತೆ ಇನ್ನೂ ಹೆಚ್ಚಿನ ಸಂಶೋಧನೆಯಲ್ಲಿ ತೊಡಗಿಸಿಕೊಂಡಿರುತ್ತಾರೆ. ಇವರ ಕಾರ್ಯಾನುಭವದ ಹಿನ್ನೆಲೆಯಲ್ಲಿ ಕಾಗೋಡು ಚಳವಳಿ ಎಂಬ ಕೃತಿಯು ನಿಮ್ಮ ಕೈಯಲ್ಲಿದೆ.

ಈ ಮಾಲಿಕೆಯಲ್ಲಿ ಕಾಗೋಡು ಚಳವಳಿ ಪ್ರಥಮ ಹೆಜ್ಜೆಯಾಗಿ ಪ್ರಕಟಗೊಳ್ಳುತ್ತಿದೆ. ಶಾಸನ ಸಭೆಗಳ ಭಾಷಣ ಸಹಿತ ಇದೇ ಮೊದಲ ಬಾರಿಗೆ ಸಮಗ್ರ ಮತ್ತು ಸಂಕ್ಷಿಪ್ತವಾಗಿ ಚಳವಳಿಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಲೇಖಕರು ಇಲ್ಲಿ ಮಾಡಿದ್ದಾರೆ. ಈ ಕುರಿತು ಉಭಯ ಸದನದಲ್ಲಿ ನಡೆದ ಚರ್ಚೆಗಳನ್ನು ಇಲ್ಲಿ ಸಂಗ್ರಹಿಸಿದ್ದಾರೆ.

ಚಳವಳಿ ನಡೆದ ಹಿನ್ನೆಲೆ, ಸದನಗಳಲ್ಲಿ ನಡೆದ ಕಲಾಪಗಳು, ಕ್ಷೇತ್ರಕಾರ್ಯ ಮಾಡಿ ಅನೇಕ ಮಾಹಿತಿ ಸಂಗ್ರಹಿಸಿದ್ದಾರೆ. ಹೋರಾಟ ನಡೆದ ಬಗೆ, ನಾಡಿನ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಪ್ರಜ್ಞೆಯ ಅರಿವಾಗಿ ಪರಿಣಮಿಸಿರುವ ಹಿನ್ನೆಲೆಯ ಒಳನೋಟವನ್ನೊಳಗೊಂಡ ಈ ಕೃತಿಯು ಎಲ್ಲರಿಗೂ ಉಪಯುಕ್ತವಾಗುತ್ತದೆ ಎಂದು ಭಾವಿಸಲಾಗಿದೆ.

ಈ ಪುಸ್ತಕವು ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

ಶ್ರಮವಹಿಸಿ ಉತ್ತಮ ಕೃತಿಯನ್ನು ಹೊರತಂದ ಮತ್ತು ಸ್ವತಃ ಮುಖಪುಟವನ್ನು ರಚಿಸಿಕೊಟ್ಟ ಲೇಖಕರಿಗೆ ಅಭಿನಂದನೆಗಳು.

**ವಿ. ಆರ್. ಸುದರ್ಶನ್**
ಸಭಾಪತಿ
ಕರ್ನಾಟಕ ವಿಧಾನಪರಿಷತ್ತು, ಬೆಂಗಳುರು.

**ಕೃಷ್ಣ**
ಸಭಾಧ್ಯಕ್ಷರು
ಕರ್ನಾಟಕ ವಿಧಾನಸಭೆ

ಬೆಂಗಳೂರು
ಜನವರಿ, 2005

# ಮುನ್ನುಡಿ

ಕರ್ನಾಟಕ ರಾಜ್ಯ ವಿಧಾನಮಂಡಲದ ಗ್ರಂಥಾಲಯ ಸಮಿತಿಯು ಮಾಹಿತಿಪೂರ್ಣ ಕೃತಿಗಳನ್ನು ಹೊರತರುತ್ತಿರುವುದು ಸಂತಸದ ವಿಷಯ. ರಾಜ್ಯದಲ್ಲಿ ನಡೆದ ಪ್ರಮುಖ ಘಟನಾವಳಿಗಳನ್ನು ಕೃತಿ ರೂಪದಲ್ಲಿ ಪ್ರಕಟಿಸಲು ಉದ್ದೇಶಿಸಿರುವುದು ಶ್ಲಾಘನೀಯ.

ಸಾಮಾಜಿಕ, ಆರ್ಥಿಕ ಪ್ರಜ್ಞೆಯ ಸಂಕೇತವಾಗಿದ್ದ ಕಾಗೋಡು ಚಳವಳಿ, ಪ್ರಜಾಪ್ರಭುತ್ವದ ದನಿಗೆ ಸಂಕೇತವಾಗಿತ್ತು. ಕರ್ನಾಟಕದ ರೈತರಿಗೆ ಅರ್ಥಪೂರ್ಣ ಭೂನಕಾಶೆಯನ್ನು ರಚಿಸಿಕೊಡಲು ಕಾಗೋಡು ಚಳವಳಿ ಕಾರಣವಾಯಿತು. ಇಂತಹ ಮಹತ್ವಪೂರ್ಣವಾದ ಕಾಗೋಡು ಚಳವಳಿಯನ್ನು ದಾಖಲಿಸುವುದು ಇಂತಹ ಸಂದರ್ಭದಲ್ಲಿ ಔಚಿತ್ಯವೆನಿಸುತ್ತದೆ.

ಜಾಗತಿಕ ಸಂದರ್ಭದಲ್ಲಿ ಚಳವಳಿ ಕುರಿತು ವಿಶ್ಲೇಷಿಸುವ ಕ್ರಮ ಬೇರೆಯದೇ ಆಗಿದೆ. ನಮ್ಮದೇ ಆದ ನೆಲೆಯ, ಈ ಹೊತ್ತಿನಲ್ಲಿ ಚಳವಳಿಯನ್ನು ನೋಡುವ ಕ್ರಮ ವಿಶ್ಲೇಷಿಸುವ ಕ್ರಮ ಬಹುಮುಖ್ಯವಾಗಿ ಕಂಡು ಬರುತ್ತದೆ. ನವ ವಸಾಹತ್ತೋತ್ತರ ಚಿಂತಕರಾದ ಎಡ್ವರ್ಡ್ ಸೈದ್, ಡೆರಿಡಾ, ಫುಕೋ ಅವರ ಚಿಂತನೆಯ ನೆಲೆಯಲ್ಲಿ ಚಳವಳಿಯನ್ನು ನೋಡುವ ಕ್ರಮ ಹೆಚ್ಚು ಪ್ರಸ್ತುತ ಎನಿಸುತ್ತದೆ. ಆದರೆ ಈ ಮಾಲಿಕೆಯ ನಿರ್ಬಂಧದಂತೆ ಈ ಕೃತಿಯನ್ನು ರಚಿಸಲಾಗಿದೆ.

ಕರ್ನಾಟಕ ರಾಜ್ಯದ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಕಾಗೋಡು ಗ್ರಾಮದಲ್ಲಿ 1951 ಏಪ್ರಿಲ್ 18 ರಂದು ನಡೆದ ಚಳವಳಿ ಇಡೀ ಜಗತ್ತಿನ ಗಮನ ಸೆಳೆಯಿತು. ರಾಷ್ಟ್ರ ಮಟ್ಟದ ನಾಯಕರು ಈ ಚಳವಳಿಯಲ್ಲಿ ಪಾಲ್ಗೊಂಡಿದ್ದು ಚಳವಳಿಗೆ ಮತ್ತಷ್ಟು ಶಕ್ತಿ ತುಂಬಿತು. ಇದರಿಂದಾಗಿ ಕರ್ನಾಟಕದಲ್ಲಿ ಪರಿಣಾಮಕಾರಿಯಾದ ಭೂಸುಧಾರಣಾ ಶಾಸನವನ್ನು ಜಾರಿಗೆ ತರಲು ಕಾರಣವಾದುದನ್ನು ಸ್ಮರಿಸಬಹುದಾಗಿದೆ. ಭೂ ಹಂಚಿಕೆಯ ಕ್ರಾಂತಿಗೆ ಈ ಚಳವಳಿ ಒಂದು ಸಾಂಕೇತಿಕವಾಯಿತು ಎಂಬುದು ಗಮನೀಯ ಅಂಶ.

ಕಾಗೋಡು ಚಳವಳಿಯಲ್ಲಿ ಭಾಗವಹಿಸಿದ್ದ ಮಹನೀಯರ ಪರಿಚಯ, ಕಾಗೋಡಿನ ಪ್ರಾದೇಶಿಕ ವಿವರ, ಹೋರಾಟದ ಬಗೆ ಮುಂತಾದ ವಿವರಗಳನ್ನು ಇಲ್ಲಿ ದಾಖಲಿಸಲಾಗಿದೆ. ಕಿರುಹೊತ್ತಿಗೆಯ ನಿಯಮದಂತೆ ಅದರ ಮಿತಿಯಲ್ಲಿಯೇ ವಿಷಯವನ್ನು ಸಂಕ್ಷಿಪ್ತವಾಗಿ ನೀಡಬೇಕಾಗಿದ್ದರೂ, ಸಮಗ್ರತೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿದ್ದೇನೆ. ಈ ಕೃತಿಯಲ್ಲಿ ಅಡಕವಾಗಿರುವ ವಿಷಯ ಸಮಸ್ತ ಓದುಗರಿಗೆ ಉಪಯುಕ್ತವಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಕಾಗೋಡು ಚಳವಳಿ ಕೃತಿ ರಚನೆಯಲ್ಲಿ ತೊಡಗಿದ್ದಾಗ ಸೂಕ್ತ ಸಲಹೆ, ಮಾರ್ಗದರ್ಶನ ನೀಡಿದ ಮಾನ್ಯ ಶ್ರೀ ಕಾಗೋಡು ತಿಮ್ಮಪ್ಪನವರಿಗೆ, ಕಾಗೋಡು ಚಳವಳಿಯ ಬಗ್ಗೆ ಸಮಗ್ರ ವಿವರ ನೀಡಿದ ಚಳವಳಿಯ ರೂವಾರಿ ಶ್ರೀ ಗಣಪತಿಯಪ್ಪನವರಿಗೆ, ಡಾ. ಹಿ.ಚಿ. ಬೋರಲಿಂಗಯ್ಯ, ಹುಚ್ಚಪ್ಪಮಾಸ್ಟರ್ ಇವರುಗಳಿಗೆ ನನ್ನ ಕೃತಜ್ಞತೆಗಳು.

ಈ ಕಿರುಹೊತ್ತಿಗೆಯನ್ನು ಹೊರತರಲು ಗುರುತರವಾದ ಜವಾಬ್ದಾರಿಯನ್ನು ವಹಿಸಿಕೊಟ್ಟ ಕರ್ನಾಟಕ ವಿಧಾನಮಂಡಲದ ಗ್ರಂಥಾಲಯ ಉಪಸಮಿತಿಯ ಅಧ್ಯಕ್ಷರಿಗೂ, ಸದಸ್ಯರಿಗೂ ನಾನು ಕೃತಜ್ಞನಾಗಿದ್ದೇನೆ. ವಿಧಾನಸಭೆಯಲ್ಲಿ ಮಾಡಿದ ಚರ್ಚೆಗಳನ್ನು ಸಂಗ್ರಹಿಸಲು ವಿಧಾನಸೌಧಕ್ಕೆ ಹೋದಾಗ ವಿಧಾನಸಭೆಯ ಕಾರ್ಯದರ್ಶಿ ಟಿ. ರಾಜಣ್ಣನವರು, ಹೆಚ್ಚುವರಿ ಕಾರ್ಯದರ್ಶಿ ಎಸ್.ಬಿ. ಪಾಟೀಲ್‌ರವರು, ಜಗನ್ನಾಥ್‌ರವರು, ಸಂಶೋಧನಾಶಾಖೆಯ ಸಿಬ್ಬಂದಿಯವರು ತುಂಬಾ ಸಹಕಾರ ನೀಡಿದ್ದಾರೆ ಇವರಿಗೆ ನನ್ನ ಕೃತಜ್ಞತೆಗಳು. ನನ್ನ ಬರವಣಿಗೆಯನ್ನು ಪ್ರೋತ್ಸಾಹಿಸಿದ ಎಂ. ಚಂದ್ರಪ್ಪ ಮತ್ತು ಹಾಲಮ್ಮನವರಿಗೆ ನನ್ನ ನಮನಗಳು. ಈ ಕೃತಿಯ ಹಸ್ತಪ್ರತಿಯನ್ನು ಬೆರಳಚ್ಚು ಮಾಡಿಕೊಟ್ಟ ಎಂ.ಸಿ. ರವಿ ಮತ್ತು ಕೃತಿ ರಚನೆಗೆ ಸಹಕರಿಸಿದ ನಂದೀಶ್‌ಕುಮಾರ್, ಸತೀಶ್, ಸುರೇಶ, ಡಾ.ಬಿ.ಪ್ರಹ್ಲಾದರೆಡ್ಡಿ ಹಾಗೂ ಈ ಕೃತಿ ರಚನೆಗೆ ಪರೋಕ್ಷವಾಗಿ ಸಹಕರಿಸಿದ ನನ್ನೆಲ್ಲಾ ಹಿತೈಷಿಗಳಿಗೆ ಕೃತಜ್ಞತೆಗಳು.

ಕೂಡ್ಲಿಗೆರೆ ಮಲ್ಲಿಕಾರ್ಜುನ
ಪತ್ರಕರ್ತರು,
ಕೂಡ್ಲಿಗೆರೆ, ಭದ್ರಾವತಿ, ಶಿವಮೊಗ್ಗ.

# ಕಾಗೋಡು ಚಳವಳಿಯ ತಾತ್ವಿಕ ಆಶಯ

ಮನುಷ್ಯ ಸಮಾಜ ವ್ಯವಸ್ಥೆಯಲ್ಲಿ ವರ್ಗ, ವರ್ಣ ಸಂಘರ್ಷಗಳು ಉಳ್ಳವರ ಪಾಲಿನ ಸ್ವತ್ತಾಗಿ,ಅಸಮಾನತೆಯ ಸೃಷ್ಟಿಗೆ ಕಾರಣವಾಗಿವೆ. ಶೋಷಕರ ವಿರುದ್ಧ, ಶೋಷಿತ ಸಮುದಾಯ ಅಲ್ಲಲ್ಲಿ ಸೊಲ್ಲೆತ್ತಿ ತನ್ನ ಸ್ವಾಭಾವಿಕ ಹಕ್ಕಿಗಾಗಿ ಹೋರಾಟ ನಡೆಸುತ್ತಾ ಬಂದಿರುವುದನ್ನು ಇತಿಹಾಸದುದ್ದಕ್ಕೂ ಕಾಣುತ್ತೇವೆ. ಈ ಶೋಷಿತ ಸಮುದಾಯ ದಬ್ಬಾಳಿಕೆಯ ಹುಟ್ಟನ್ನು ಅಲ್ಲಲ್ಲಿ ದಮನಿಸುತ್ತಾ ಬಂದಿರುವುದನ್ನು ಕಾಣುಬಹುದಾಗಿದೆ.

ಭಾರತ ಕೃಷಿ ಪ್ರಧಾನ ರಾಷ್ಟ್ರ. ಹಲವಾರು ದಶಕಗಳಿಂದಲೂ ರೈತ ಹಾಗೂ ರೈತಕಾರ್ಮಿಕ ಸಮುದಾಯದ ಮೇಲೆ ಶೋಷಣೆ ನಡೆಯುತ್ತಲೇ ಬಂದಿದೆ. ರೈತನ ಜೀವನಾಡಿಯಾದ ಭೂಮಿಯನ್ನು ಕಸಿದುಕೊಳ್ಳುವ, ರೈತನನ್ನು ದುಡಿಸಿಕೊಳ್ಳುವ,ಜೀತದಾಳಾಗಿ ನಡೆಸಿಕೊಳ್ಳುವ ತಂತ್ರವನ್ನ ವ್ಯವಸ್ಥಿತವಾಗಿ ಭೂಮಾಲೀಕ ವರ್ಗ ಮಾಡಿಕೊಂಡು ಬರುತ್ತಿದೆ.ಸ್ವಾಭಾವಿಕವಾಗಿ ಲಭಿಸುವ ಭೂಮಿಯನ್ನು ಅನುಭವಿಸಲು, ರೈತನಿಗೆ ಲಭ್ಯವಿಲ್ಲದಂತೆ ಮಾಡುವ ರಾಜತಾಂತ್ರಿಕತೆ,ಕುಟಿಲೋಪಾಯಗಳನ್ನು ಭೂಮಾಲೀಕ ಮಾಡಿಕೊಂಡು ಬರುತ್ತಿದ್ದಾನೆ.ಭೂಮಾಲೀಕನ ನಿಯಂತ್ರಣದಲ್ಲಿ ಭೂಮಿ ಇದ್ದುದರ ಪರಿಣಾಮವಾಗಿ ಗೇಣಿದಾರ,ಕೂಲಿಕಾರ್ಮಿಕ ವರ್ಗದ ಸೃಷ್ಟಿಗೆ ಕಾರಣವಾಯಿತು.

ಭಾರತ ಬ್ರಿಟಿಷರಿಂದ ಋಣಮುಕ್ತಗೊಂಡ ನಂತರ ಸ್ವಾತಂತ್ರ್ಯೋತ್ತರ ಭಾರತದಲ್ಲಿನಮ್ಮವರೇ ಆಡಳಿತ ಚುಕ್ಕಾಣಿ ಹಿಡಿದರು. ಭಾರತದ ನಾಯಕರು ಉಳ್ಳವರಿಗೆ, ಬಂಡವಾಳಶಾಹಿಗಳಿಗೆ ಮಣೆಹಾಕಿ ಶೋಷಿತ ಸಮುದಾಯವನ್ನು ದೂರ ಇಟ್ಟು ನೋಡ ತೊಡಗಿದರು.

ಭೂಮಾಲೀಕರಿಂದ ರೋಸಿ ಹೋಗಿದ್ದ ರೈತರು ಸಾಂಸ್ಕೃತಿಕ ಅಭ್ಯಾಸವನ್ನು ಎರಡು ರೀತಿಯಲ್ಲಿ ಅಭ್ಯಸಿಸಲು ಯತ್ನಿಸಿದರು. ಪ್ರತಿಭಟನೆಯ ಮೂಲಕ ವ್ಯಕ್ತಗೊಳಿಸುವುದು, ಮತ್ತು ಭೂಮಾಲೀಕನ ಜೀವನ ಶೈಲಿಯ ವಿರುದ್ಧವಾಗಿರುವುದು. ಆದರೆ ಸಂಸ್ಕೃತಿ ಮತ್ತು ಸಾಮಾಜಿಕ ಸಂಬಂಧಗಳನ್ನು ವಿರೋಧಿಸುವಾಗ ರೈತರು ಮತ್ತು ರೈತ ಹೋರಾಟಗಳು ..ುಗರಿಯದಂತೆಯೇ ವಿರೋಧಾಭಾಸಗಳಿಗೆ ಈಡಾಗಿರುವುದನ್ನು ಕಾಣಬಹುದು. ಅಂತಹ

ಹೋರಾಟಗಳು ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದವರನ್ನು ಶೋಷಿಸುವ ಅಥವಾ ದಮನಿಸುವ ಸಾಮಾಜಿಕ ಸಂಬಂಧ ಹಾಗೂ ನಂಬಿಕೆಗಳನ್ನು ಪ್ರತಿಭಟಿಸಲು ಯತ್ನಿಸುತ್ತಾ ಬಂದಿರುವುದನ್ನು ಕಾಣಬಹುದಾಗಿದೆ.

ಇಂತಹ ಸಂಕ್ರಮಣಾವಸ್ಥೆಯ ಕಾಲದಲ್ಲಿಯೇ ದೇಶದ ಕೆಲವು ಭಾಗಗಳಲ್ಲಿ ದಂಗೆ, ಚಳವಳಿಗಳು ಆರಂಭಗೊಂಡವು.ಆಗ ಉಳ್ಳವರ ಕೈಯ್ಯಲ್ಲಿನ ಅಧಿಕಾರ,ಹಣ, ಜಾತಿಬಲಗಳು ಹೆಚ್ಚು ಕಾರ್ಯನಿರ್ವಹಿಸಿದವು.ಈ ಸಂದರ್ಭದಲ್ಲಿ ಎಚ್ಚೆತ್ತ ಕೆಳವರ್ಗದವರು ತಮಗಾದ ಅನ್ಯಾಯವನ್ನು ಪ್ರತಿಭಟಿಸಲು ಇಡೀ ದೇಶದಾದ್ಯಂತ ಹಲವು ಸಂಘಟನೆಗಳ ಮೂಲಕ ತೊಡಗಿಕೊಂಡವು. ಆಂದ್ರಪ್ರದೇಶದ ತೆಲಂಗಾಣ ಹೋರಾಟ, ಕೇರಳದ ವಾರಳೀಯರ ಹೋರಾಟ, ಮುಂತಾದ ಹೋರಾಟಗಳು ಆರಂಭಗೊಂಡವು.

ಕರ್ನಾಟಕ ರಾಜ್ಯದ ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಕಾಗೋಡು ಗ್ರಾಮದಲ್ಲಿ 1951ಏಪ್ರಿಲ್18ರಂದು ನಡೆದ ಚಳವಳಿ ಇಡೀ ಜಗತ್ತಿನ ಗಮನ ಸೆಳೆಯಿತು.ರಾಷ್ಟ್ರ ಮಟ್ಟದ ನಾಯಕರು ಈ ಚಳವಳಿಯಲ್ಲಿ ಪಾಲ್ಗೊಂಡು ಮತ್ತಷ್ಟು ಬಲವನ್ನು ತಂದುಕೊಟ್ಟಿತು. ಇದರಿಂದಾಗಿ ಕರ್ನಾಟಕಕ್ಕೆ ಪರಿಣಾಮಕಾರಿಯಾದ ಭೂಸುಧಾರಣಾ ಶಾಸನವನ್ನು ಜಾರಿಗೆ ತರಲು ಕಾರಣವಾದುದನ್ನು ಕಾಣಬಹುದಾಗಿದೆ. ರಾಷ್ಟ್ರೀಯ ಮೂಲಭೂತ ವ್ಯವಸ್ಥೆಯ ಭೂ ಹಂಚಿಕೆಯ ಕ್ರಾಂತಿಗೆ ಈ ಚಳವಳಿ ಒಂದು ಸಾಂಕೇತಿಕವಾಯಿತು ಎಂಬುದು ಗಮನೀಯ ಅಂಶವಾಗಿದೆ.

ಕರ್ನಾಟಕದಲ್ಲಿ ಮೊಟ್ಟ ಮೊದಲ ಬಾರಿಗೆ ಕೃಷಿ ಕಾರ್ಮಿಕರನ್ನು ಸಂಘಟಿಸಿ ಯಶಸ್ವಿ ಹೋರಾಟ ನಡೆಸಿದ್ದು ಕಾಗೋಡು ರೈತ ಹೋರಾಟ ಎಂಬುದನ್ನು ಪ್ರಧಾನವಾಗಿ ಗಮನಿಸಬಹುದಾಗಿದೆ. ಅಹಿಂಸಾತ್ಮಕ ರೈತ ಹೋರಾಟ ನಡೆಸಿದ್ದು ಇಲ್ಲಿನ ವಿಶೇಷವಾಗಿದೆ.

ಕಾಗೋಡು ಸತ್ಯಾಗ್ರಹ ಕರ್ನಾಟಕದಾದ್ಯಂತ ಆವರಿಸಿಕೊಂಡು ನಾಡಿನ ಸಾಂಸ್ಕೃತಿಕ ಲೋಕದ ಮೇಲೆ ಪರಿಣಾಮ ಬೀರಿತು.ಭೂಮಿ ಇಲ್ಲದವರ ಬದುಕಿಗೆ ಭೂಮಿಯನ್ನು ಒದಗಿಸಿಕೊಡಲು ಕಾರಣವಾಯಿತು.ಚಳವಳಿಯ ಪರಿಣಾಮವಾಗಿ ಕರ್ನಾಟಕದ ಭೂಮಿ ಹಂಚಿಕೆಯ ನಕ್ಷೆ ಕ್ರಮೇಣ ಬದಲಾಗುತ್ತಾ ಬಂದಿತು.ಚಳವಳಿಯ ವಿವರಗಳನ್ನು ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಿಸಲಾಗಿದೆ.



# ಕಾಗೋಡು ಗ್ರಾಮದ ಪ್ರಾದೇಶಿಕ ವಿವರ ಮತ್ತು ಹಿನ್ನೆಲೆ

ಕಾಗೋಡು ಸಾಗರ ತಾಲ್ಲೂಕಿನ ಒಂದು ಚಿಕ್ಕ ಗ್ರಾಮ . ಸಾಗರ ತಾಲ್ಲೂಕಿನ ಉತ್ತರ ಭಾಗಕ್ಕೆ ಇರುವ ಸುಮಾರು ಹನ್ನೆರಡು ಕಿಲೋ ಮೀಟರ್ ದೂರದಲ್ಲಿರುವ ಕಾಗೋಡು ಮಲೆನಾಡಿನ ಇತರ ಪ್ರದೇಶಗಳಂತೆ ದಟ್ಟವಾದ ಅರಣ್ಯದೊಳಗೆ ಇರುವ ಗ್ರಾಮವಾಗಿದೆ. ಕಾಗೋಡು ಗ್ರಾಮದ ಮಗ್ಗುಲಲ್ಲೇ ವರದಾನದಿ ಹಾದು ಹೋಗುತ್ತದೆ. ಇಲ್ಲಿನ ರೈತರು ವರದಾನದಿಯ ನೆರವಿನಿಂದ ಕೃಷಿ ಚಟುವಟಿಕೆಯನ್ನು ಮಾಡಿ ಜೀವನ ಸಾಗಿಸುತ್ತಿದ್ದಾರೆ.

ಕಾಗೋಡು ಹಿರೇನಲ್ಲೂರು ಗ್ರಾಮ ಪಂಚಾಯ್ತಿಗೆ ಸೇರುತ್ತದೆ. ಇದರ ವ್ಯಾಪ್ತಿಗೆ ಹಾಗಲಪುರ, ಮಣಗದ್ದೆ, ಸಗಮನೆ, ಸೂರಗುಪ್ಪ, ಯಲೆಕುಂದ್ಲಿ, ಶುಂಠಿಕೊಪ್ಪ, ತಟ್ಟೆಗುಂದಿ ಹಳ್ಳಿಗಳು ಬರುತ್ತವೆ. ಇದರ ಸುತ್ತಮುತ್ತ ಸೈದೂರು, ಕಾನ್ಲೆ, ಮಾಸೂರು ಗ್ರಾಮಪಂಚಾಯ್ತಿಗಳಿವೆ.

ಈ ಭಾಗದಲ್ಲೆಲ್ಲಾ ದೀವರು ಜನಾಂಗದವರು ಹೆಚ್ಚಾಗಿ ವಾಸಿಸುತ್ತಿದ್ದಾರೆ. ಲಿಂಗಾಯಿತರು, ಬ್ರಾಹ್ಮಣರು, ಮಡಿವಾಳರು, ಕುಂಬಾರರು, ಉಪ್ಪಾರರು, ಒಕ್ಕಲಿಗರು, ಪರಿಶಿಷ್ಟ ಜನಾಂಗದವರು ಈ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ.

ಆಗಿನ ದಿನಗಳಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ಬಲಾಢ್ಯರಾಗಿದ್ದವರೆಂದರೆ ಭೂಮಾಲೀಕರು. ಭೂಮಾಲೀಕತ್ವವನ್ನು ಹಿಡಿದಲ್ಲಿಟ್ಟುಕೊಂಡಿದ್ದ ಲಿಂಗಾಯಿತರು. ಈ ಭಾಗಗಳಲ್ಲಿ ಹೆಚ್ಚು ಪ್ರಭುತ್ವವನ್ನು ಹೊಂದಿದ್ದರು. ಬ್ರಾಹ್ಮಣರು ಕೃಷಿಕರಾಗಿಯೂ ಸಾಮಾಜಿಕ ,ಆರ್ಥಿಕ ಸ್ಥಿತಿಗತಿಗಳಲ್ಲಿ ಉತ್ತಮರಾಗಿದ್ದವರು . ಇತರೆ ಜನಾಂಗದವರ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳು ಅಷ್ಟೇನು ಸುಗಮವಾಗಿಲ್ಲ.

ಬಹುತೇಕ ದೀವರ ಜನಾಂಗದವರು ಇಲ್ಲಿನ ಭೂಮಾಲೀಕರ ಗೇಣಿ ರೈತರಾಗಿ ದುಡಿಯುತ್ತಿದ್ದುದು ಸಾಮಾನ್ಯವಾಗಿತ್ತು. ಅದರಲ್ಲೂ ದೀವರ ಜನಾಂಗದವರಲ್ಲಿ ಶೈಕ್ಷಣಿಕ, ಸಮಾಜಿಕವಾಗಿ ಹಿಂದುಳಿದಿದ್ದರಿಂದ, ಇಂತಹ ದೌರ್ಬಲ್ಯವನ್ನು ಬಳಸಿಕೊಂಡು ಶ್ರೀಮಂತ ಭೂಮಾಲೀಕರು ಶೋಷಣೆಗೊಳಪಡಿಸುತ್ತಿದ್ದುದು ಇಲ್ಲಿ ಸರ್ವೇಸಾಮಾನ್ಯವಾಗಿತ್ತು.

ಐವತ್ತರ ದಶಕದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದಕ್ಕಿದ್ದರೂ ದೇಶೀಯ ವ್ಯವಸ್ಥೆಯೊಳಗೆ ಪಟ್ಟ ಭದ್ರ ಹಿತಾಸಕ್ತಿಗಳ ಹಿಡಿತದಲ್ಲಿ ಎಷ್ಟೋ ಮಂದಿಯ ಸ್ವತಂತ್ರದ ಕನಸು, ನನಸಾಗದೇ

ಉಳಿದಿತ್ತು. ಶಿಕ್ಷಣ,ವಸತಿ, ಭೂಮಿ ಒಡೆತನ,ಇನ್ನಿತರೆ ಸವಲತ್ತುಗಳನ್ನು ದೀನ ದಲಿತರು ಅನುಭವಿಸುವ ಸ್ಥಿತಿಯಲ್ಲಿರಲಿಲ್ಲ.

ಅಂದಿನ ದಿನಗಳಲ್ಲಿ ಪಟ್ಟಭದ್ರ ಹಿತಾಸಕ್ತಿಗಳಿಗೆ ಸಿಕ್ಕಿ ನಲುಗಿದ ಎಷ್ಟೋ ದೀನ ದಲಿತರ ಬದುಕುಗಳ ಕನಸುಗಳು ಅರಳಲೇ ಇಲ್ಲ. ಇದರ ಪ್ರತಿಕಾರವಾಗಿ ಭೂಮಾಲೀಕರ ವಿರುದ್ಧ ಸಿಡಿದೆದ್ದ ಪ್ರದೇಶಗಳಲ್ಲಿ ಕಾಗೋಡು ಗ್ರಾಮ ಪ್ರಮುಖವಾದುದು. ಕಾಗೋಡು ಚಳುವಳಿ ಭೂಮಾಲೀಕತ್ವ,ಗೇಣಿದಾರಿಕೆ, ಅಳತೆಯಲ್ಲಿ ಮೋಸ,ತುಚ್ಛವಾಗಿ ನಡೆಸಿಕೊಳ್ಳುತ್ತಿದ್ದ ಬಗೆಗೆ ರೋಸಿ , ಚಳವಳಿಯಾಗಿ ಹೆಪ್ಪುಗಟ್ಟತೊಡಗಿತು.

ಇಲ್ಲಿನ ಭೂಮಾಲೀಕರು ಗೇಣಿ ರೈತರಿಗೆ ನೀಡುತ್ತಿದ್ದ ಪಶುಸದೃಶ ಕಿರುಕುಳ,ಗೇಣಿ ನೀಡುವಾಗ ಅಳತೆಯ ಮಾಪನದಲ್ಲಿ ಮಾಡುತ್ತಿದ್ದ ಮೋಸ, ಶೈಕ್ಷಣಿಕವಾಗಿ, ಆರ್ಥಿಕವಾಗಿ ,ಸಾಮಾಜಿಕವಾಗಿ ಯಾವುದೇ ರೀತಿ ಮುಂದುವರೆಯದಂತೆ ಪಟ್ಟ ಭದ್ರಹಿತಾಸಕ್ತಿಗಳು ನಿಯಂತ್ರಿಸುತ್ತಿದ್ದುದನ್ನು ಗಮನಿಸಬಹುದಾಗಿದೆ. ದೀವರು ಜನಾಂಗದವರಿಗೆ ಇಲ್ಲಿನ ಭೂಮಾಲೀಕರು ಮಾಡುತ್ತಿದ್ದ ಅನ್ಯಾಯದ ಅರಿವು ಮನದಟ್ಟಾಗುತ್ತಿದ್ದಂತೆ, ಕಾಗೋಡಿನ ಒಡೆಯರ ವಿರುದ್ಧ ಗೇಣಿದಾರರು ಸೆಟೆದು ನಿಂತು ಹೋರಾಟಕ್ಕೆ ಸಿದ್ಧಗೊಳ್ಳುತ್ತಿದ್ದುದು, ಮುಂದೊಂದು ದಿನ ಚಳವಳಿ ರಾಷ್ಟ್ರದ ಗಮನ ಸೆಳೆಯುವಂತಾಯಿತು.

ಕಾಗೋಡು ಒಂದು ಪುಟ್ಟ ಗ್ರಾಮವಾದರೂ ಇದರ ವಿಸ್ತೀರ್ಣ 891 ಎಕರೆ,15 ಗುಂಟೆ ಮಾತ್ರ ಒಳಗೊಂಡಿದೆ. ಈ ಊರಿನಲ್ಲಿ ದೀವರ ಕುಟುಂಬಗಳೇ ಅಧಿಕ. ಹರಿಜನ, ಮಡಿವಾಳ, ಲಿಂಗಾಯಿತ,ಅಕ್ಕಸಾಲಿಗ, ಮುಸ್ಲಿಂ , ಉಪ್ಪಾರ ಇನ್ನಿತರರು ಈ ಊರಿನಲ್ಲಿ ವಾಸಿಸುತ್ತಿರುವ ಗ್ರಾಮದಲ್ಲಿ ಒಡೆಯರ ದರ್ಪದೌರ್ಜನ್ಯಗಳೇ ಮೇಲುಗೈಯ್ಯಾಗಿದ್ದವು.

ಇಲ್ಲಿನ ದೀವರು ರಾಜರ ಆಡಳಿತದಲ್ಲಿ ಸೈನಿಕರಾಗಿ ಸೇವೆ ಸಲ್ಲಿಸಿರುವುದು ಇತಿಹಾಸದಿಂದ ತಿಳಿದು ಬರುತ್ತದೆ. ಕ್ರಮೇಣ ಕೂಲಿಕಾರ್ಮಿಕರಾಗಿ , ಗೇಣಿರೈತರಾಗಿ ಭೂಮಿಯನ್ನೇ ಅಪ್ಪಿಕೊಂಡು ಬೆಳೆದು ಬಂದವರು ಕಾಗೋಡಿನ ಗೇಣಿ ರೈತರು. ಭೂಮಿ ಮತ್ತು ಕಾಗೋಡು ಗೇಣಿದಾರನ ಅವಿನಾಸಂಬಂಧದ ಕುರುಹಾಗಿ ಉಳುವವನೆ ನೆಲದೊಡೆಯ ಎಂಬ ಉಕ್ತಿಮೂಲಕ ಚಳವಳಿ ಸ್ಫೋಟಗೊಳ್ಳ ತೊಡಗಿತು.

ಕಾಗೋಡಿನ ಭೂಮಾಲೀಕರಾದ ಕೆ.ಜಿ. ಒಡೆಯರ್ ಕುಟುಂಬವು ಚಳವಳಿಯ ಕೇಂದ್ರ ಬಿಂದುವಾಯಿತು ಎಂಬುದು ಗಮನೀಯ ಅಂಶ. ಈ ಊರಿನ ದೀವರ ಕುಟುಂಬಗಳೆಲ್ಲವೂ ಒಡೆಯರ ಜಮೀನಿನ ಗೇಣಿ ರೈತರಾಗಿ ದುಡಿಯುತ್ತಿದ್ದುದು ಸ್ವಾತಂತ್ರ್ಯಪೂರ್ವ ಕಾಲದಿಂದಲೂ,

ಕಾಣಬಹುದಾಗಿದೆ. ಆಗಿನ ಕಾಲಕ್ಕೆ ವರ್ಚಸ್ವೀ ವ್ಯಕ್ತಿ ಎಂದರೆ ಕೆ.ಜಿ.ವಡೆಯರ್. ಇವರು ಮೂರು ಬಾರಿ ಸಂಸತ್ ಸದಸ್ಯರಾಗಿ ರಾಜಕೀಯದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದಂತವರು. ಕರ್ನಾಟಕ ರಾಜ್ಯದ ಕಾಂಗ್ರೆಸ್‌ನಲ್ಲಿ ವರಿಷ್ಠ ನಾಯಕರಾಗಿದ್ದವರು. ಕೆ.ಜಿ. ಒಡೆಯರ್ ಆಗಿನ ದಿನದಲ್ಲಿ ನೆಹರೂರವರ ನಿಕಟವರ್ತಿಯಾಗಿದ್ದವರು. ಇಂತಹ ಪ್ರಭಾವಿ ಕುಟುಂಬದ ವಿರುದ್ಧ ಗೇಣಿ ರೈತರು ತಿರುಗಿ ಬಿದ್ದು ಭೂಮಾಲೀಕತ್ವದ ದೌರ್ಜನ್ಯ ಮತ್ತು ಗೇಣಿ ರೈತರಿಂದ ಪಡೆದ ಗೇಣಿ ಬತ್ತ ಅಳತೆಯ ಪ್ರಮಾಣದಲ್ಲಿ ಆಗುತ್ತಿದ್ದ ಮೋಸದ ಬಗ್ಗೆ ಏರಿದ ದನಿಯಲ್ಲಿ ಪ್ರಶ್ನೆ ಎತ್ತಿದ್ದು ಈ ಭೂಭಾಗದ ಗೇಣಿ ರೈತರು ಎಂಬುದನ್ನು ಗಮನಿಸಬೇಕಾದ ಅಂಶವಾಗಿದೆ.

ಭೂಮಾಲೀಕರ ವಿರುದ್ಧ ಸಿಡಿದ ಕಾಗೋಡು ಗೇಣಿದಾರನ ಘೋಷಣೆ "ಉಳುವವನೆ ನೆಲದೊಡೆಯ" ಎಂಬ ಸಾಕಾರದ ಕನಸನ್ನು ಬಿತ್ತಿ ಹೋರಾಟ ನಡೆಸಿದರು. ಈ ಪ್ರದೇಶ ಬೌಗೋಳಿಕವಾಗಿ ಅಷ್ಟೇನು ದೊಡ್ಡ ಹಿನ್ನೆಲೆಯನ್ನು ಹೊಂದಿಲ್ಲದಿದ್ದರೂ, ಇಲ್ಲಿನ ಹೋರಾಟದ ಫಲ ಇತಿಹಾಸವನ್ನೇ ಸೃಷ್ಟಿಸಿತು. ಕಾಗೋಡು ರೈತರ ಹೋರಾಟದ ರೂವಾರಿಗಳಾದ ಗಣಪತಿಯಪ್ಪನವರು,ಈ ಭಾಗದ ಗೇಣಿ ರೈತರು,ಸಮಾಜವಾದಿ ಪಕ್ಷ,ಸಮಾಜವಾದಿ ನಾಯಕರುಗಳಾದ ಡಾ.ರಾಮಮನೋಹರ ಲೋಹಿಯಾ,ಶಾಂತವೇರಿ ಗೋಪಾಲಗೌಡ,ರಮಾನಂದ ಮಿಶ್ರ, ಜಯಪ್ರಕಾಶ್‌ನಾರಾಯಣ್ ,ಸಮಾಜವಾದಿ ನಾಯಕರು ಹಾಗೂ ಮುಂತಾದ ನಾಯಕರು,ಸಾಗರ ತಾಲ್ಲೂಕು ರೈತ ಸಂಘಟನೆ, ಮಲೆನಾಡ ರೈತ ಸಂಘಗಳು ಕಾಗೋಡು ಚಳವಳಿಯನ್ನು ರಾಷ್ಟ್ರ ಅಂತರರಾಷ್ಟ್ರೀಯ ಮಟ್ಟದ ಗಮನ ಸೆಳೆಯಿತು. ಇದರ ಪರಿಣಾಮವಾಗಿ ರಾಜ್ಯದಲ್ಲಿ ಪರಿಣಾಮಕಾರಿಯಾದಂತಹ ಭೂಶಾಸನ ರಚನೆಗೆ ನಾಂದಿಯಾಯಿತು.



# ಕಾಗೋಡು ಚಳವಳಿಯ ಬೆಳವಣಿಗೆ

ವಸಾಹತುಶಾಹಿ ಆಡಳಿತದುದ್ದಕ್ಕೂ ಭೂಮಾಲೀಕ ಮನೆತನಗಳು ಮಾತ್ರ ತಮ್ಮ ಗ್ರಾಮದ ಪಟೇಲ ಅಥವಾ ಮುಖ್ಯಸ್ಥನಾಗಲು ಸದಾ ಅಪೇಕ್ಷೆಪಡುತ್ತಿದ್ದುದನ್ನು ಗಮನಿಸಬಹುದಾಗಿದೆ. ಅಂತಹ ಪಟ್ಟವನ್ನು ದೊರಕಿಸಿಕೊಂಡ ನಂತರದಲ್ಲಿ ಮೇಲಧಿಕಾರಿಗಳೊಂದಿಗೆ ಹಾಗೂ ಸಿಬ್ಬಂದಿಗಳೊಂದಿಗೆ ನೇರ ಸಂಪರ್ಕ ದೊರೆಯುತ್ತಿದ್ದುದನ್ನು ಕಾಣಬಹುದಾಗಿದೆ.ತನ್ನ ಸ್ವಂತದ ಜಮೀನುಗಳ ಹಿತವನ್ನು ರಕ್ಷಿಸಿಕೊಳ್ಳಲು ಅಧಿಕಾರಿಗಳ ನೆರವು ದೊರೆಯುತ್ತಿದ್ದುದನ್ನು ಗಮನಿಸಬಹುದಾಗಿದೆ. ಜಮೀನ್ದಾರಿ ವ್ಯವಸ್ಥೆಗೆ ವ್ಯವಸ್ಥಿತವಾಗಿ ಪೊಲೀಸ್ ರಕ್ಷಣೆಯೂ ಸಹ ಒದಗುತ್ತಿತ್ತು.ಭೂಮಾಲೀಕರು ವ್ಯವಸ್ಥಿತ ಅನುಕೂಲಗಳಿಂದ ರೈತರನ್ನು ಶೋಷಿಸುವುದು ಇವರಿಗೆ ಸುಲಭದ ದಾರಿಯಾಗಿದ್ದುದನ್ನು ಕಾಣಬಹುದಾಗಿದೆ.

ಶೋಷಿತ ಸಮುದಾಯವು ಹಲವಾರು ವರ್ಷಗಳಿಂದ ಶೋಷಣೆ ಸಹಿಕೊಂಡೇ ಬಂದಿರುವುದನ್ನು ಬಹು ಭಾಗದಲ್ಲಿ ಕಾಣಬಹುದಾಗಿದೆ.ಶೋಷಣೆಯ ವಿರುದ್ಧ ಸ್ಫೋಟಗೊಳ್ಳುವ ಸಾಂಸ್ಕೃತಿಕ ಪಲ್ಲಟಗಳು,ಅರಿವು,ಸಾಮಾಜಿಕ ನ್ಯಾಯ ದೊರಕಿಸುವ ನಾಯಕತ್ವ ಈ ಪ್ರದೇಶಕ್ಕೆ ಅಗತ್ಯವಾಗಿದ್ದ ಸಂದರ್ಭವನ್ನು ಗಮನಿಸಬಹುದಾಗಿದೆ. ಇಂತಹ ಗ್ರಹಿಕೆಯ ಕೂಸಾಗಿ ಗಣಪತಿಯಪ್ಪನವರು ನಿಂತರು.

"ಕಾಗೋಡು ಚಳವಳಿ ಒಬ್ಬ ವ್ಯಕ್ತಿಗೆ ಅಥವಾ ಒಂದು ಹಳ್ಳಿಗೆ ಮಾತ್ರ ಸಂಬಂಧಪಟ್ಟದ್ದಲ್ಲ. ಆ ಕಾಲದ ಜಮೀನ್ದಾರಿ ಪದ್ಧತಿಯಿಂದ, ರೈತ ವರ್ಗದವರ ಮೇಲೆ ನಡೆಯುತ್ತಿದ್ದ ದಬ್ಬಾಳಿಕೆ ಮತ್ತು ಶೋಷಣೆಯ ವಿರುದ್ಧವಾಗಿ ನಡೆದ ಹೋರಾಟವಾಗಿತ್ತು" ಎನ್ನುವ ಕಾಗೋಡು ಚಳವಳಿ ರೂವಾರಿ ಗಣಪತಿಯಪ್ಪನವರ ಮಾತಿನಲ್ಲಿರುವ ಹೋರಾಟದ ದನಿಯ ತೀವ್ರತೆಯನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ.

ಕಾಗೋಡಿನಲ್ಲಿ ಗೇಣಿ ರೈತರಿಗೆ ವಿಧಿಸುತ್ತಿದ್ದ ಗೇಣಿ ಪ್ರಮಾಣವನ್ನು ಭೂಮಾಲಿಕರೇ ನಿರ್ಧರಿಸುತ್ತಿದ್ದರು. ಯಾವುದೇ ರೀತಿಯ ಗೇಣಿಯ ಆಧಾರವಾಗಿ ಯಾವುದೇ ಬಿಲ್ ಅಥವಾ ಪತ್ರವನ್ನು ಕೇಳುವಂತಿರಲಿಲ್ಲ ಮತ್ತು ಭೂಮಾಲೀಕರ ಅನುಮತಿ ಇಲ್ಲದೆ ಉಳುಮೆ ಮಾಡಲು ಜಮೀನಿಗೆ ಪ್ರವೇಶಿಸುವಂತಿರಲಿಲ್ಲ. ಭೂಮಾಲಿಕರು ಗೇಣಿ ರೈತರ ನಡುವೆ ಪರಸ್ಪರ

ಹೊಂದಾಣಿಕೆ ಕಂಡು ಬರದೇ ಇದ್ದಲ್ಲಿ , ಗೇಣಿ ರೈತನಿಗೆ ಉಳುಮೆ ಮಾಡಲು ಅವಕಾಶವಿರುತ್ತಿರಲಿಲ್ಲ. ಇದರಿಂದಾಗಿ ಯಾವುದೇ ರೀತಿಯ ರಕ್ಷಣೆ ಭೂಮಾಲೀಕರಿಂದಾಗಲೀ, ಸರ್ಕಾರದಿಂದಾಗಲೀ ಒದಗುತ್ತಿರಲಿಲ್ಲ.

ಕಾಗೋಡಿನ ಗೇಣಿ ರೈತರು ಭೂಮಾಲೀಕರಾದ ಒಡೆಯರಿಗೆ ಗೇಣಿ ನೀಡುವಾಗ ಬತ್ತವನ್ನು ಅಳೆಯುತ್ತಿದ್ದ, ಮೂರುವರೆ ಸೇರು ಅಥವಾ ನಾಲ್ಕು ಸೇರಿನ ಕೊಳಗದಲ್ಲಿಯೇ ನೀಡಬೇಕಿತ್ತು. ಒಡೆಯರು ಮಾತ್ರ ರೈತರಿಗೆ ಸಾಲ ನೀಡುವಾಗ ಮೂರು ಸೇರಿನ ಸರ್ಕಾರಿ ಕೊಳಗದಲ್ಲಿಯೇ ಅಳೆದು ಕೊಡುತ್ತಿದ್ದರು. ಅಳತೆಯಲ್ಲಿ ವ್ಯತ್ಯಾಸ ಮಾಡಿ ಗೇಣಿ ರೈತರನ್ನು ವಂಚಿಸುತ್ತಿದ್ದರು. ಇದಲ್ಲದೆ ಒಡಯರ ಮನೆಯಲ್ಲಿ ಹುಲ್ಲು, ಸಲಿಗೆ ಬತ್ತ, ಪೆಚ್ಚಿನ ಬತ್ತ, ಮುಂತಾದ ರೂಪಗಳಲ್ಲಿ ಒಡೆಯನಿಗೆ ನೀಡಬೇಕಿತ್ತು. ಇದಲ್ಲದೆ ವರ್ಷಕ್ಕೆ ಹತ್ತುಹದಿನೈದು ಆಳು ಮಾಡುವ ಕೆಲಸವನ್ನು ಗೇಣಿರೈತ ಉಚಿತವಾಗಿ ಭೂಮಾಲೀಕರ ಮನೆಯಲ್ಲಿ ಮಾಡಬೇಕಿತ್ತು.

## ಭೂಮಾಲೀಕರ ಶೋಷಣೆಯ ಸ್ವರೂಪ

ಕಾಗೋಡಿನ ಒಡೆಯರು ಗೇಣಿ ರೈತರನ್ನು ನಡೆಸಿಕೊಳ್ಳುತ್ತಿದ್ದ ರೀತಿಯನ್ನು ಹೋರಾಟಗಾರ ಗಣಪತಿಯಪ್ಪನವರ ಮಾತಿನಲ್ಲಿಯೇ ಇಲ್ಲಿ ದಾಖಲಿಸಲಾಗಿದೆ. "ಕಾಗೋಡು ಒಡೆಯರ ಮಕ್ಕಳು ತೊಟ್ಟಿಲ ಶಿಶುವಾಗಿದ್ದರೂ ಕೂಡ, ಅವರನ್ನು ಅಣ್ಣಯ್ಯನವರು ಅಕ್ಕಮ್ಮನವರು ಎಂದು ಬಹುವಚನದಿಂದ ಸಂಭೋಧಿಸಬೇಕು. ಅವರಲ್ಲಿ ಊಟ ಮಾಡುವುದಾದರೆ ಕೊಟ್ಟಿಗೆಯಲ್ಲಿ ಇಲ್ಲವೇ ಅವರು ನಾಯಿಕಟ್ಟುವ ಜಾಗದಲ್ಲಿ ಕುಳಿತು ಉಣ್ಣಬೇಕು. ತಾನು ಉಂಡನೆಲಕ್ಕೆ ಸಗಣಿ ಸಾರಿಸಿ, ತಂಬಿಗೆ ತೊಳೆದಿಟ್ಟು, ಒಡೆಯರಿಗೆ ಸೊಂಟಬಾಗಿಸಿ ನಮಸ್ಕಾರ ಹೇಳಬೇಕು. ಇವುಗಳನ್ನು ಮೀರಿದವರಿಗೆ ಕಂಬಕ್ಕೆ ಕಟ್ಟಿಹಾಕಿ ಶಿಕ್ಷಿಸುವ ಉದಾಹರಣೆಗಳೇನು ಕಡಿಮೆ ಇಲ್ಲ".

"ಇವೆಲ್ಲವನ್ನೂ ಪೊಲೀಸರಿಗಾಗಲೀ, ಸರ್ಕಾರಕ್ಕಾಗಲೀ ತಿಳಿಸುವ ಸ್ಥಿತಿಯೂ ಇರಲಿಲ್ಲ. ಯಾಕೆಂದರೆ, ಇವರೆಲ್ಲರೂ ಅವಿದ್ಯಾವಂತರಾಗಿದ್ದವರು. ಆದ್ದರಿಂದ ಸರ್ಕಾರವೆಂದರೆ ಅವರಿಗೆ ಒಡಯರೇ ಆಗಿದ್ದರು. ಆಗ ಇವರಿಗೆ ವಿದ್ಯಾಭ್ಯಾಸದ ಅವಕಾಶವೇ ಇರಲಿಲ್ಲ. ಯಾರಾದರೂ ತಮ್ಮ ಮಕ್ಕಳನ್ನು ಓದಲು ಕಳಿಸುತ್ತಾರೆಂದರೆ, ಅವರಿಗೆ ಒಡೆಯರು ಇಲ್ಲಸಲ್ಲದ ಕಿರುಕುಳಕೊಟ್ಟು ಮಕ್ಕಳು ಓದದಂತೆಯೇ ಮಾಡುತ್ತಿದ್ದರು".

"ಒಳ್ಳೆಯ ಬಟ್ಟೆ ಧರಿಸಿದರೂ ಒಡೆಯರಿಂದ ಬಯ್ಯಿಸಿಕೊಳ್ಳಬೇಕಾಗುತಿತ್ತು. ಒಡೆಯರಿಗೆ ಸರಿಸಮಾನರಾಗಿ ಕೂಡುವುದೇ ದೊಡ್ಡ ಅಪರಾಧವಾಗುತ್ತಿತ್ತು. ಉದ್ದವಾಗಿ ಪಂಚೆ ಉಡುವುದು,ಹೆಂಗಸರು ಉದ್ದವಾಗಿ ಸೀರೆ ಉಡುವುದನ್ನೂ ಒಡೆಯರು ಸಹಿಸುತ್ತಿರಲಿಲ್ಲ. ಒಡೆಯರ ಮನೆಮುಂದಿನ ರಸ್ತೆಯಲ್ಲಿ, ಗೇಣಿರೈತರು ಹೋಗುವಾಗ ಕಾಲಲ್ಲಿ ಮೆಟ್ಟಿದ್ದ ಜೋಡುಗಳನ್ನು ಕಳಚಿ, ಕೈಯಲ್ಲಿ ಹಿಡಿದುಕೊಂಡು ಒಡೆಯರ ಮನೆದಾಟಿ ಮುಂದೆ ಹೋದ ಮೇಲೆ ಅವುಗಳನ್ನು ಹಾಕಿಕೊಳ್ಳಬೇಕಾಗಿತ್ತು. ಇವೆಲ್ಲವೂ ಆಗ ಸಾಮಾನ್ಯ ನಡವಳಿಕೆಗಳೇ ಆಗಿದ್ದವು. ಗೇಣಿ ರೈತನಿಗೆ ಸ್ವಾಭಿಮಾನ ಸ್ವಾತಂತ್ರ್ಯ ಎಂಬುದೇ ಮರೆತುಹೋಗಿತ್ತು. ತಮ್ಮ ಇರುವಿಕೆ ಇದಕ್ಕಿಂತ, ಗುಲಾಮಗಿರಿ ಪದ್ಧತಿ ಎಂದರೆ ಉಚಿತ". ಎಂಬುದನ್ನು ಗಣಪತಿಯಪ್ಪನವರ ಮಾತಿನಲ್ಲಿ ಇಲ್ಲಿನ ಸ್ಥಿತಿಗತಿಗಳನ್ನು ಅರ್ಥೈಸಿಕೊಳ್ಳಬಹುದು.

ಕಾಗೋಡು ಒಡೆಯರು ಮತ್ತು ಭೂಮಾಲೀಕರ ವಿರುದ್ಧ ಸಿಡಿದೇಳುವ ಸ್ಥಿತಿ ಈ ಭಾಗದ ಗೇಣಿ ರೈತನಿಗಿರಲಿಲ್ಲ. ಇದೇ ಸಂದರ್ಭದಲ್ಲಿ ಸುತ್ತಮುತ್ತಲ ಹಳ್ಳಿಗಳಲ್ಲಿ ಹೊಟ್ಟೆ ನೋವು ಜ್ವರ ಮುಂತಾದ ಸಣ್ಣಪುಟ್ಟ ಕಾಯಿಲೆಗಳು ಜನರಿಗೆ ಬರತೊಡಗಿತು. ಇದರಿಂದಾಗಿ ಊರ ಮುಖ್ಯಸ್ಥರೆಲ್ಲ ಸೇರಿ ಇದಕ್ಕೆ ಕಾರಣವೇನು ಎಂದು ಚರ್ಚಿಸ ತೊಡಗಿದರು. ಹಿರೇನಲ್ಲೂರಿನ ದೇವಸ್ಥಾನದ ವಿಗ್ರಹ ಮುಕ್ಕಾಗಿರುವುದರಿಂದಾಗಿ ಜನರಿಗೆ ಇಂತಹ ಸಂಕಷ್ಟ ಬಂದೊದಗಿದೆ ಇಂತಹ ಸಂಕಷ್ಟದಿಂದ ಪಾರಾಗಲು ಪುನಃ ಈಶ್ವರ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಬೇಕೆಂದು ತೀರ್ಮಾನಿಸಿದರು. ವಿಗ್ರಹ ಜೀರ್ಣೋದ್ಧಾರಕ್ಕಾಗಿ ಸಹಕಾರ ನೀಡಬೇಕಾಗಿ ಬಂದಿದ್ದರಿಂದ ಈ ಭಾಗದ ಎಲ್ಲಾ ಗೇಣಿ ರೈತರಿಂದ ದವಸಧಾನ್ಯ ಹಾಗೂ ನಗದು ರೂಪದಲ್ಲಿ ವಸೂಲಿ ಮಾಡಿದರು. ಭೂಮಾಲೀಕರು ಈ ಸಮಾರಂಭ ನಡೆಸುವುದಾಗಿ ತೀರ್ಮಾನಿಸಲಾಯಿತು. ಇದರಂತೆ ಎಲ್ಲಾ ಗೇಣಿ ರೈತರಿಂದ ವಂತಿಗೆಯನ್ನು ವಸೂಲಿ ಮಾಡಲಾಯಿತು. ಸಮಾರಂಭದ ದಿನ ಹತ್ತಿರವಾದಂತೆ ಅದಕ್ಕೆ ಆಹ್ವಾನಪತ್ರಿಕೆಯ ಮುದ್ರಣದಲ್ಲಿ ತೋರಿದ ತಾರತಮ್ಯದ ಪರಿಣಾಮವಾಗಿ ಸ್ವಾಭಿಮಾನದ ಕಿಡಿ ಹೊತ್ತಿತು.

ಸಮಾರಂಭಕ್ಕಾಗಿ ದವಸಧಾನ್ಯಗಳನ್ನು ಧಾರಾಳವಾಗಿ ನೀಡಿದ್ದ ಗೇಣಿ ರೈತರ ಹೆಸರನ್ನು ಆಹ್ವಾನ ಪತ್ರಿಕೆಯಲ್ಲಿ ಮುದ್ರಿಸದೇ ಕೇವಲ ಭೂಮಾಲೀಕರ ಹೆಸರಗಳನ್ನು ಮುದ್ರಿಸಿದ್ದು ಗೇಣಿ ರೈತರ ಸ್ವಾಭಿಮಾನಕ್ಕೆ ಧಕ್ಕೆ ಒದಗಿಸಿತು. ಇದನ್ನು ಕಂಡ ಚಳವಳಿ ನಾಯಕ ಗಣಪತಿಯಪ್ಪನವರು ಹಿರೇನಲ್ಲೂರಿನ ಊರಿನ ಮುಖಂಡರನ್ನು ಸೇರಿಸಿ,ಚರ್ಚೆ ನಡೆಸಿ ತಮ್ಮ ಜನಾಂಗದವರ ಹೆಸರನ್ನು ಬಿಟ್ಟಿದ್ದು ಇಡೀ ಜನಾಂಗದವರ ಸ್ವಾಭಿಮಾನಕ್ಕೆ ಧಕ್ಕೆ ಒದಗಿ ಬಂದಿದೆ ಎಂದು ವಿವರಿಸಿದರು. "ವೀರಶೈವ ಮಂಡಳಿ" ಎಂದು ಅಚ್ಚಾಗಿದ್ದ

ಆಹ್ವಾನಪತ್ರಿಕೆಯನ್ನು ಗಮನಿಸಿದ ಗಣಪತಿಯಪ್ಪ ಮತ್ತು ಊರಿನ ಮುಖಂಡರು ಸೇರಿ ಪುನಃ ಅದೇ ದಿನ "ದೀವರ ಮಂಡಳಿ" ಎಂದು ಮುದ್ರಿಸಿ ದೀವರ ಜನಾಂಗಕ್ಕೆ ಆಹ್ವಾನಪತ್ರಿಕೆಯನ್ನು ಹಂಚಲಾಯಿತು. ಈ ಸುದ್ದಿ ಕಾಳ್ಗಿಚ್ಚಿನಂತೆ ಹರಡಿ ಸುತ್ತಮುತ್ತಲಿನ ಲಿಂಗಾಯಿತ ಭೂಮಾಲಿಕರ ಕೆಂಗಣ್ಣಿಗೆ ತುತ್ತಾಯಿತು.ಇದರ ಪರಿಣಾಮವಾಗಿ ಭೂಮಾಲಿಕರು ಹಿರೇನಲ್ಲೂರಿನ ಮನೆಗಳಿಗೆ ಬೆಂಕಿ ಹಚ್ಚಲು ಹೂಡಿದ್ದ ಸಂಚನ್ನು ಇಡೀ ಊರಿನ ಜನತೆ ಒಗ್ಗಟ್ಟಾಗಿ ಸೇರಿ ಹಿಮ್ಮೆಟ್ಟಿಸಿದರು. ಒಗ್ಗಟ್ಟಾಗಿ ಮೊಟ್ಟ ಮೊದಲ ಬಾರಿಗೆ ಇಲ್ಲಿನ ಭೂಮಾಲೀಕರ ವಿರುದ್ಧ ನಿಂತಿದ್ದನ್ನು ಸೂಕ್ಷ್ಮವಾಗಿ ಗಮನಿಸಿದ ಗಣಪತಿಯಪ್ಪನವರು ಸಂಘಟನಾ ಶಕ್ತಿಯ ಕಸುವನ್ನು ಇಲ್ಲಿ ಕಂಡು ಕೊಂಡರು. ಅಂದಿನಿಂದಲೇ ಭೂಮಾಲೀಕರು ನಡೆಸುತ್ತಿದ್ದ ಅನ್ಯಾಯಗಳನ್ನು ಗಣಪತಿಯಪ್ಪನವರು ದೀವರ ಜನಾಂಗದವರಿಗೆ ಒಂದೊಂದನ್ನೇ ವಿವರಿಸತೊಡಗಿದರು. ಈ ಸನ್ನಿವೇಶದಲ್ಲಿ ಹೋರಾಟಕ್ಕೆ ತಕ್ಕ ವೇದಿಕೆಯನ್ನು ಸಜ್ಜುಗೊಳಿಸುತ್ತಾ ಬಂದರು.

ಕಾಗೋಡಿನಲ್ಲಿ ಗಣಪತಿಯಪ್ಪನವರ ನೇತೃತ್ವದಲ್ಲಿ ಒಡೆಯರ ವಿರುದ್ಧ ಹೋರಾಟ ನಡೆಸಲು ಗೇಣಿ ರೈತರು ಸಿದ್ಧರಾದರು. ಚಳವಳಿಯ ಕಾವು ಏರ ತೊಡಗಿದಂತೆ ಈ ಭಾಗದ ಭೂಮಾಲೀಕರೆಲ್ಲಾ ಸೇರಿ ಚಳವಳಿಯನ್ನು ಮುರಿಯಲು ಯೋಜನೆಯನ್ನು ರೂಪಿಸ ತೊಡಗಿದರು.ಅನೇಕ ಬಾರಿ ಚಳವಳಿಯನ್ನು ಮೊಳಕೆಯಲ್ಲಿಯೇ ಹೊಸಕಿ ಹಾಕಲು ಭೂಮಾಲೀಕ ಸಮುದಾಯ ಯತ್ನಿಸಿತು. ಅದು ಫಲಕಾರಿಯಾಗಲಿಲ್ಲ.

ಚಳವಳಿಯನ್ನು ಭೂಮಾಲೀಕರು ನಿಯಂತ್ರಿಸಲು ಯತ್ನಿಸಿದಂತೆ ಚಳವಳಿ ಇನ್ನೂ ತೀವ್ರಗೊಳ್ಳುತ್ತಾ ಸಾಗಿತು.ಇದರೊಂದಿಗೆ ಸಮಾಜವಾದಿ ಪಕ್ಷದ ಪ್ರವೇಶದಿಂದ ಚಳವಳಿ ಮತ್ತಷ್ಟು ಬಲಸೇರಿಕೊಂಡಿತು. ಇಂತಹ ಸಾಂಘಿಕ ಶಕ್ತಿಯ ಮುಂದೆ ಭೂಮಾಲೀಕರು ತಲೆಬಾಗಲೇ ಬೇಕಾಯಿತು.ಈ ಸುದ್ದಿ ರಾಷ್ಟ್ರ ಅಂತರರಾಷ್ಟ್ರೀಯ ಮಟ್ಟದವರೆಗೂ ಕಾಡ್ಗಿಚ್ಚಿನಂತೆ ಹಬ್ಬಿ ತೊಡಗಿತು.ರಾಷ್ಟ್ರೀಯ ನಾಯಕರು ಇತ್ತಗಮನವನ್ನು ಕೇಂದ್ರೀಕರಿಸುವಂತಾಯಿತು.



# ಕಾಗೋಡು ಚಳವಳಿಯ ಹೋರಾಟದ ಸ್ವರೂಪ

ಭಾರತ ಬ್ರಿಟಿಷರಿಂದ ಋಣಮುಕ್ತಗೊಂಡ ನಂತರ ಸ್ವಾತಂತ್ರ್ಯೋತ್ತರ ಭಾರತದಲ್ಲಿನಮ್ಮವರೇ ಆಡಳಿತ ಚುಕ್ಕಾಣಿ ಹಿಡಿದರು. ಭಾರತದ ನಾಯಕರು ಉಳ್ಳವರಿಗೆ, ಬಂಡವಾಳಶಾಹಿಗಳಿಗೆ ಮಣೆಹಾಕಿ ಶೋಷಿತ ಸಮುದಾಯವನ್ನು ದೂರ ಇಟ್ಟು ನೋಡ ತೊಡಗಿದರು.ಇಂತಹ ಸಂಕ್ರಮಣಾವಸ್ಥೆಯಲ್ಲಿಯೇ ದೇಶದ ಕೆಲವು ಭಾಗಗಳಲ್ಲಿ ದಂಗೆ, ಚಳವಳಿಗಳು ಆರಂಭಗೊಂಡವು. ಉಳ್ಳವರ ಕೈಯ್ಯಲ್ಲಿನ ಅಧಿಕಾರ,ಹಣ, ಜಾತಿಬಲಗಳು ಹೆಚ್ಚು ಕಾರ್ಯನಿರ್ವಹಿಸಿದವು.ತಮಗಾದ ಅನ್ಯಾಯವನ್ನು ಪ್ರತಿಭಟಿಸಲು ಇಡೀ ದೇಶದಾದ್ಯಂತ ಹಲವು ಸಂಘಟನೆಗಳು ತೊಡಗಿಕೊಂಡವು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧೀಜಿಯವರೊಂದಿಗೆ ಗುರುತಿಸಿಕೊಂಡಿದ್ದ ಗಣಪತಿಯಪ್ಪನವರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದವರು. ಕುಂದಾಪುರದಿಂದ ಹಿರೇನಲ್ಲೂರಿಗೆ ಆಗಮಿಸಿ ಮಾಸ್ತರಿಕೆ ಮಾಡಿಕೊಂಡಿದ್ದ ಗಣಪತಿಯಪ್ಪನವರಿಗೆ ಈ ಪ್ರದೇಶದ ಭೂಮಾಲೀಕರು ಗೇಣಿರೈತರನ್ನು ನಡೆಸಿಕೊಳ್ಳುತ್ತಿದ್ದ ರೀತಿಯನ್ನು ಕಂಡು ತನ್ನ ಗರ್ಭದೊಳಗೆ ಹೋರಾಟದ ಕಿಡಿಯನ್ನು ಅವಿತಿಟ್ಟುಕೊಂಡಿದ್ದರು.

ಗಣಪತಿಯಪ್ಪನವರು ಗೇಣಿದಾರರನ್ನು ನಡೆಸಿಕೊಳ್ಳುತ್ತಿದ್ದ ಪರಿಯನ್ನು ಗಮನಿಸಿದ ಇವರು ಅನ್ಯಾಯದ ವಿರುದ್ಧ ಸಂಘಟನೆಯನ್ನು ಅಸ್ತಿತ್ವಕ್ಕೆ ತರಬೇಕೆಂದು ಅವರ ಮನಸ್ಸು ಕಾತರಿಸುತ್ತಿತ್ತು. ಇದರ ಫಲವಾಗಿ ಸಂಘವನ್ನು ಅಸ್ತಿತ್ವಕ್ಕೆ ತರಲು ನಾಂದಿಯಾಡಿದರು.

ಸಾಗರ ತಾಲೂಕಿನ ಮುರತ್ತೂರು ಗ್ರಾಮದಲ್ಲಿ ದಿನಾಂಕ 4.1.1948 ರಂದು ಬೃಹತ್ ರೈತರ ಸಮಾವೇಶ ನಡೆಯಿತು. ಇದೇ ಸಂದರ್ಭದಲ್ಲಿ "ಸಾಗರ ತಾಲೂಕ್ ರೈತ ಸಂಘ" ಅಸ್ತಿತ್ವಕ್ಕೆ ಬಂದಿತು. ಸಂಘದ ಅಧ್ಯಕ್ಷರಾಗಿ ಡಿ.ಮೂಕಪ್ಪನವರು, ಕಾರ್ಯದರ್ಶಿಯಾಗಿ ಎಚ್.ಗಣಪತಿಯಪ್ಪನವರು, ಉಳಿದ ಹದಿನೈದು ಮಂದಿ ಸಂಘದ ಸದಸ್ಯರಾಗಿ ಆಯ್ಕೆಯಾದರು.

ಸಾಗರ ತಾಲೂಕ್ ರೈತಸಂಘ ಸ್ಥಾಪನೆಯಾದ ನಂತರದಲ್ಲಿ ಭೂಮಾಲೀಕರು ಗೇಣಿರೈತರ ಮೇಲೆ ಸವಾರಿ ಮಾಡುತ್ತಿದ್ದುದರ ವಿರುದ್ಧವಾಗಿ ಸಂಘವು ತನ್ನದೇ ಆದ ಬೇಡಿಕೆಗಳನ್ನು ಸರ್ಕಾರದ ಮುಂದೆ ಇಡಲು ಯತ್ನಿಸಿತು. ಈ ಬಗ್ಗೆ ಗೇಣಿ ರೈತರಿಗೆ ತಿಳಿಸಲು ಅಲ್ಲಲ್ಲಿ ಸಭೆ ಸೇರಿಸಿ ಜಾಗೃತಿ ಮೂಡಿಸುವ ಕಾರ್ಯವನ್ನು ಸಂಘವು ಕೈಗೆತ್ತಿಕೊಂಡಿತು.

## ಈ ಬೇಡಿಕೆಗಳ ಅಂಶಗಳನ್ನು ರೈತರ ಮನವರಿಕೆಗಾಗಿ ಸಾಗರ ತಾಲೂಕ್ ರೈತ ಸಂಘವು ಗೇಣಿ ರೈತರ ಮುಂದಿಟ್ಟಿದ್ದು.

1. ಭೂಮಿಯನ್ನು ಗೇಣಿಗೆ ಕೊಟ್ಟಿದ್ದೇವೆಂದೂ ಅಥವಾ ಗೇಣಿ ಪಡೆದಿದ್ದೇವೆಂದೂ ಒಪ್ಪಂದ ಕರಾರಿನಂತೆ ಬರೆದುಕೊಟ್ಟು , ಗೇಣಿ ಪಡೆದಿದ್ದಕ್ಕೆ ರಶೀದಿ ಕೊಡಬೇಕು.
2. ಮೂರು ಸೇರಿನ ಕೊಳಗದಲ್ಲಿಯೇ ಗೇಣಿಯನ್ನು ಪಡೆಯಬೇಕು. ಅಲ್ಲದೆ ಹೆಚ್ಚಿನ ಭತ್ತ ಸಲಿಗೆ ಭತ್ತ ವಗೈರೆ ಎಂದು ಚೀಲಕ್ಕೆ ಎರಡು - ಮೂರು ಸೇರು ಹೆಚ್ಚಾಗಿ ಪಡೆಯುವುದು ನಿಲ್ಲಬೇಕು.
3. ಅತಿವೃಷ್ಟಿ, ಅನಾವೃಷ್ಟಿಗಳಿಂದ ಬೆಳೆ ನಷ್ಟವಾದಾಗ ಗೇಣಿಯನ್ನು ಪಡೆಯಬಾರದು.
4. ವರ್ಷಕ್ಕೆ ನಾಲ್ಕರಿಂದ ಹತ್ತು ಆಳುಗಳು ಒಡೆಯರ ಬಿಟ್ಟಿ ಕೆಲಸದ ದುಡಿತವನ್ನು ರದ್ದು ಪಡಿಸಬೇಕು.

ಎಂಬ ಅಂಶಗಳನ್ನು ಗೇಣಿ ರೈತರ ಮುಂದೆ ಮನವರಿಕೆ ಮಾಡಿಕೊಟ್ಟಿತು. ಈ ಭೂಭಾಗದ ಸುತ್ತಮುತ್ತಲಿನ ಗೇಣಿರೈತರಿಗೆ ಸಾಂಸ್ಕೃತಿಕ ಅರಿವು ಎಚ್ಚರವನ್ನು ಸ್ವಾಭಿಮಾನಿ ಸುಪ್ತ ಮನಸ್ಸಿಗೆ ತಲುಪಿಸಿದರು. ಇಂತಹ ಅಂಶಗಳನ್ನು ಎಲ್ಲರ ಮನಸ್ಸಿನಲ್ಲೂ ಕಿಡಿಯನ್ನು ಹೊತ್ತಿಸತೊಡಗಿದವು.ಸ್ವಾಭಿಮಾನ ಕೆರಳತೊಡಗಿತು. ಗೇಣಿರೈತರು ಭೂಮಾಲಿಕರನ್ನು ಪ್ರಶ್ನಿಸುವ ಮನೋಭೂಮಿಕೆ ಸಿದ್ಧಗೊಳ್ಳತೊಡಗಿತ್ತು. ಸಂಘಟನೆ ಒಂದು ಹೆಜ್ಜೆ ಮುಂದೆ ರಾಜ್ಯ ಸರ್ಕಾರದ ಮುಂದೆ ತಮ್ಮ ಬೇಡಿಕೆಯನ್ನು ಮುಂದಿಡತೊಡಗಿತು. ಈ ಅಂಶಗಳು ಕೆಳಗಿನಂತಿವೆ.

### ಇದೇ ಸಂದರ್ಭದಲ್ಲಿ ರೈತ ಸಂಘವು ಸರ್ಕಾರದ ಮುಂದೆ ಇಡಲಾದ ಬೇಡಿಕೆಯ ಅಂಶಗಳು ಈ ಕೆಳಕಂಡಂತಿವೆ.

1. ಗೇಣಿದಾರರ ಭೂಮಿಯನ್ನು ಭೂ ಒಡೆಯರು ಕೈ ತಪ್ಪಿಸದಂತೆ ತಕ್ಷಣ ಆರ್ಡಿನೆನ್ಸ್ ಹೊರಡಿಸಬೇಕು. ಅಲ್ಲದೆ ಗೇಣಿದಾರರ ರಕ್ಷಣೆ ನೀಡುವ ಟೆನೆನ್ಸಿ ಕಾನೂನು ಜಾರಿಗೆ ತರಬೇಕು.

2. ಸರ್ಕಾರವು ರೈತರಿಗೆ ರಿಯಾಯ್ತಿಗಳನ್ನು ಘೋಷಿಸಿದಾಗಲೆಲ್ಲ ಕೇವಲ ಕಂದಾಯ ಕೊಡುವವರನ್ನೇ ರೈತರೆಂದು ಪರಿಗಣಿಸುತ್ತಿದೆ. ಇನ್ನು ಮುಂದೆ ಗೇಣಿದಾರರೂ ರೈತರೆಂದು ಪರಿಗಣಿಸಿ ಅವರಿಗೆ ಸರ್ಕಾರದ ರಿಯಾಯ್ತಿ ಸೌಲಭ್ಯಗಳನ್ನು ಒದಗಿಸಬೇಕು. ಉದಾಹರಣೆಗೆ, ಬೆಳೆ ರಕ್ಷಣೆಗೆ ಬಂದೂಕು ಲೈಸನ್ಸ್, ನಾಟಾ ರಿಯಾಯ್ತಿ ಬೆಳೆಸಾಲ, ಅಭಿವೃದ್ಧಿ ಸಾಲ ಇತ್ಯಾದಿ.

ಈ ಮೇಲಿನ ಅಂಶಗಳ ಪಟ್ಟಿ ತಯಾರಿಸಿ ಸಾಗರ ತಾಲೂಕ್ ರೈತ ಸಂಘವು ಮುದ್ರಿಸಿ ಈ ಭಾಗದ ಎಲ್ಲಾ ಗೇಣಿರೈತರಿಗೆ ಹಂಚಿ ಸಾರ್ವತ್ರಿಕವಾಗಿ ಜಾಗೃತಿ ಮೂಡಿಸಲು ಕಾರ್ಯಕೈಗೊಂಡಿತು. ಗೇಣಿರೈತರು ತಮಗೆ ಅನ್ಯಾಯವಾಗುತ್ತಿದ್ದುದರ ಬಗ್ಗೆ ಅರಿವಾಗಿ ಸಂಘಟನೆಗೆ ಕೇಂದ್ರೀಕೃತರಾದರು. ಇದರ ಸುಳಿವರಿತ ಭೂಮಾಲೀಕರೆಲ್ಲಾ ಒಟ್ಟಾಗಿ "ಸಾಗರ ತಾಲೂಕು ಹಿಡುವಳಿದಾರರ ಸಂಘ"ವನ್ನು ಸ್ಥಾಪಿಸಿದರು. ಈ ಸಂಘಟನೆಯ ಮೂಲಕ ರೈತ ಸಂಘದ ಹೋರಾಟವನ್ನು ವಿಫಲಗೊಳಿಸಲು ಯತ್ನಿಸುತ್ತಾ ಬಂದರು. ರೈತ ಸಂಘಟನೆಗೆ ಸೇರುವ ರೈತರಿಗೆ ಬೇರೆ ಬೇರೆ ರೂಪದಲ್ಲಿ ಬೆದರಿಕೆ ಒಡ್ಡಲಾರಂಭಿಸಿದರು.

ಈ ಭಾಗದ ಗೇಣಿ ರೈತರು ಭೂಮಾಲೀಕರಿಗೆ ಗೇಣಿ ನೀಡಿದ್ದಕ್ಕೆ ರಶೀತಿ ನೀಡಬೇಕೆಂದು ಕೇಳಿದರು. ಆದರೆ ಭೂಮಾಲೀಕರು ಮೂರುವರೆ ಸೇರಿನ ಕೊಳಗದಲ್ಲಿ ಮಾತ್ರ ಗೇಣಿ ಪಡೆಯಲಾಗುವುದು ಎಂದು ಪಟ್ಟುಹಿಡಿದರು. ಇದರಿಂದಾಗಿ ಗೇಣಿ ರೈತರಿಗೂ ಮತ್ತು ಭೂಮಾಲೀಕರ ನಡುವೆ ಘರ್ಷಣೆಗೆ ಕಾರಣವಾಯಿತು. ಸಂಘಟನೆಗೆ ಸೇರಿದ್ದ ರೈತರಿಗೆ ಇದು ನೇರ ಪರಿಣಾಮ ಬೀರಿತು. ಸಂಘದ ಸದಸ್ಯರ್‍ಯಾರು ಭೂಮಾಲೀಕರ ಜಮೀನಿಗೆ ಪ್ರವೇಶ ಮಾಡದಂತೆ ತಡೆಗಟ್ಟಬೇಕು ಎಂದು ಭೂಮಾಲೀಕರ ಹಿಡುವಳಿಗಾರರ ಸಂಘ ತೀರ್ಮಾನಿಸಿತು.

ಇಂತಹ ತಡೆಯನ್ನು ವಿರೋಧಿಸಿ ಜಮೀನಿಗೆ ನುಗ್ಗಲು ಯತ್ನಿಸಿದ ರೈತ ಸಂಘದ ಕಾರ್ಯಕರ್ತರನ್ನು ಬಡಿಯಲಾಯಿತು. ಅವರು ತಂದಿದ್ದ ನೇಗಿಲು ನೊಗವನ್ನು ಮುಂತಾದ ಪಿಠೋಪಕರಣಗಳನ್ನು ಮುರಿದು ಹಾಳುಗೆಡವಲಾಯಿತು. ಭೂಮಾಲೀಕರ ದೌರ್ಜನ್ಯದಿಂದ ರೈತರು ಯಾವುದೇ ರೀತಿಯ ಹಿಂಸಾತ್ಮಕ ಕೃತ್ಯಕ್ಕೆ ಇಳಿಯಲಿಲ್ಲ. ಈ ಮೊದಲೇ ನಿರ್ಧರಿಸಿದಂತೆ ರೈತ ಸಂಘವು ಅಹಿಂಸಾತ್ಮಕ ಹೋರಾಟಕ್ಕೆ ಒತ್ತು ನೀಡಿದ ಪರಿಣಾಮವಾಗಿ ಹೋರಾಟ ಸಾಗಿತ್ತು. ದಿನಾಂಕ 17.4.1953 ರಂದು ಭೂಮಾಲೀಕರು ನಡೆಸಿದ ದೌರ್ಜನ್ಯದಿಂದಾಗಿ ತುಂಡಾದ ನೇಗಿಲು ನೊಗವನ್ನು ಹೊತ್ತು ಸಾಗರ ತಾಲೂಕಿಗೆ ರೈತರೆಲ್ಲಾ ಆಗಮಿಸಿದರು. ಈ ಸುದ್ದಿ ಇಡೀ ಸಾಗರ ತಾಲ್ಲೂಕಿನಾದ್ಯಂತ ಹರಡಿತು. ಸಾಗರ ತಾಲೂಕಿನ ತಹಶೀಲ್ದಾರರ ಕಚೇರಿಗೆ ರೈತರು ತೆರಳಿ, ತುಂಡಾದ ನೇಗಿಲು ನೊಗಗಳನ್ನು ರಾಶಿ ರಾಶಿಯಾಗಿ ಒಡ್ಡಿ ಪ್ರತಿಭಟಿಸತೊಡಗಿದರು. ಗೇಣಿ ರೈತರಿಗೆ ರಕ್ಷಣೆ ಒದಗಿಸಬೇಕು ಎಂದು ತಹಶೀಲ್ದಾರರ

ಮುಂದೆ ಮನವಿ ಮಾಡಲಾಯಿತು. ಆದರೆ ಮನವಿಗೆ ಯಾವುದೇ ರೀತಿಯ ತೃಪ್ತಿಕರ ಉತ್ತರ ಬರಲಿಲ್ಲ. ಸರ್ಕಾರ ರೈತರ ರಕ್ಷಣೆ ಬರುವುದಿಲ್ಲವೆಂದು ತಿಳಿದು ಚಳುವಳಿಯ ನಾಯಕ ಗಣಪತಿಯಪ್ಪನವರ ನೇತೃತ್ವದಲ್ಲಿ ಸಾಗರದ ಗಾಂಧಿಮಂದಿರದಲ್ಲಿ ಸಭೆ ಸೇರಲಾಯಿತು.

ಈ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಕಾಗೋಡಿನ ಒಡೆಯರ ಭೂಮಿಯಲ್ಲಿ ಸತ್ಯಾಗ್ರಹ ನಡೆಸಬೇಕು. ಅದು ತಂಡ ತಂಡವಾಗಿ ನಡೆಸಬೇಕೆಂಬ ತೀರ್ಮಾನ ಕೈಗೊಂಡಿತು. ಯಾವುದೇ ರೀತಿ ಹಿಂಸಾತ್ಮಕ ಕೃತ್ಯಗಳಿಗೆ ಅವಕಾಶ ಮಾಡದಂತೆ ಅಹಿಂಸಾತ್ಮಕ ಸತ್ಯಾಗ್ರಹಕ್ಕೆ ಸಭೆಯು ಸಮ್ಮತಿ ನೀಡಿತು.



# ಕಾಗೋಡು ಚಳವಳಿ ಆರಂಭ

ರಾಜಕೀಯ ಪ್ರಮುಖ ನಾಯಕರಾಗಿದ್ದ ಕಾಗೋಡು ಗ್ರಾಮದ ಕಾಂಗ್ರೆಸ್ ಮುಖಂಡ ಕೆ.ಜಿ.ಒಡೆಯರ್ ಈ ಗ್ರಾಮದಲ್ಲಿ ಚಳವಳಿ ನಡೆದರೆ ಸರ್ಕಾರ ಅದನ್ನು ಗಮನಿಸುತ್ತದೆ ಎಂದು ತಿಳಿಸಿದರು.ಇಂತಹ ಎಚ್ಚರಿಕೆಗೆ ಮಣೆಹಾಕದೆ ದಿನಾಂಕ18.4.1951ರಂದು ಕಾಗೋಡು ಒಡೆಯರ ಭೂಮಿಯಲ್ಲಿ ಸಾಗರ ತಾಲೂಕು ರೈತ ಸಂಘವು ಸತ್ಯಾಗ್ರಹವನ್ನು ಆರಂಭಿಸಿತು. ಗೇಣಿ ರೈತರು ಕೇಳಿದ್ದ ನ್ಯಾಯಯುತ ಬೇಡಿಕೆಗಳನ್ನು ಭೂಹಿಡುವಳಿದಾರ ಸಂಘಟನೆ ತಿರಸ್ಕರಿಸಿತು. ತಾಲೂಕಿನ ಭೂಹಿಡುವಳಿದಾರರ ಸಂಘದ ಸದಸ್ಯರಲ್ಲಿ ಒಬ್ಬರಾಗಿದ್ದ ಕಾಗೋಡು ಒಡೆಯರು ಪೊಲೀಸರು ಮತ್ತು ಭೂಮಾಲೀಕರೊಂದಿಗೆ ಆಗಮಿಸಿ ರೈತ ಸಂಘದ ಪ್ರತಿಭಟನೆಯನ್ನು ವಿಫಲಗೊಳಿಸಲು ಯತ್ನಿಸಿದರು. ಪೊಲೀಸರಿಂದ ಏಟು ತಿಂದ ರೈತರು ತನ್ನ ಪ್ರಾಣದ ಹಂಗನ್ನು ತೊರೆದು ಚಳವಳಿಯಲ್ಲಿ ಭಾಗಿಯಾಗಿ ಅನೇಕ ರೈತ ನಾಯಕರು ಬಂಧಿತರಾದರು. ಈ ಸಂದರ್ಭದಲ್ಲಿ ರೈತನಾಯಕ ಗಣಪತಿಯಪ್ಪನವರು ಭೂಗತರಾಗಿ ಹೋರಾಟ ನಡೆಸಲು ಸನ್ನದ್ಧರಾದರು.

ರೈತ ಸಂಘದ ಸಭೆಯ ನಿರ್ಣಯದಂತೆ ಮರುದಿನ ಅಂದರೆ 19.4.1951ರಂದು ಭೂಮಾಲೀಕರ ಜಮೀನಿಗೆ ಸತ್ಯಾಗ್ರಹಕ್ಕೆ ಹೋದ ರೈತರು ಮತ್ತು ಇದರ ನೇತೃತ್ವವಹಿಸಿದ್ದ ಸಾಗರ ತಾಲೂಕ್ ರೈತ ಸಂಘದ ಅಧ್ಯಕ್ಷ ಡಿ. ಮೂಕಪ್ಪನವರನ್ನು ಪೊಲೀಸರು ಬಂಧಿಸಿದರು. ಇದೇ ವೇಳೆಯಲ್ಲಿ ಸಂಘದ ಪ್ರಧಾನ ಕಾರ್ಯದರ್ಶಿಯಾದ ಗಣಪತಿಯಪ್ಪನವರನ್ನು ಬಂಧಿಸಲು ಹುಡುಕುತ್ತಿದ್ದಾರೆಂದು ತಿಳಿದು ಭೂಗತರಾಗಿಯೇ ಚಳವಳಿಯ ಪ್ರೇರಕ ಶಕ್ತಿಯಾಗುಳಿಯುವ ನಿರ್ಧಾರ ಕೈಗೊಂಡರು. ಪುನಃ ಮಾರನೇಯ ದಿನವು ಸಹ ಇಪ್ಪತ್ತೊಂದು ಮಂದಿ ರೈತರನ್ನು ಬಂಧಿಸಲಾಯಿತು. ಇದನ್ನು ನೋಡಲು ಆಗಮಿಸಿದ್ದ ಸಾವಿರಾರು ಮಂದಿ ರೈತರನ್ನು ಪೊಲೀಸರು ಚದುರಿಸಲು ಲಾಠಿ ಪ್ರಹಾರ ಮಾಡಿದರು.

ರೈತ ನಾಯಕರ ಮತ್ತು ಭೂಮಾಲೀಕರ ಬಿಕ್ಕಟ್ಟಿನ ಸ್ಥಿತಿಯನ್ನು ಕಂಡಿದ್ದ ಸಾಗರ ತಾಲ್ಲೂಕಿನ ಅಂದಿನ ತಹಶೀಲ್ದಾರರಾಗಿದ್ದ ನಂದೀಶ್ವರರು ರೈತಸಂಘದ ಅಧ್ಯಕ್ಷ ಡಿ.ಮೂಕಪ್ಪನವರನ್ನು ಮತ್ತು ಕಾಗೋಡಿನ ಭೂಮಾಲೀಕರನ್ನು ಒಟ್ಟುಗೂಡಿಸಿ ಸಂಧಾನಕ್ಕೆ ಯತ್ನಿಸಿದರು. ಆದರೆ ತಹಶೀಲ್ದಾರರ ಮಾತಿಗೆ ಯಾವುದೇ ರೀತಿ ಭೂಮಾಲೀಕರು ಮತ್ತು ರೈತ ಸಂಘವು ಸ್ಪಂದಿಸದೆ ಇದ್ದುದರಿಂದ ಸಂಧಾನ ಕೈಗೂಡಲಿಲ್ಲ.

ಗಣಪತಿಯಪ್ಪನವರೇ ತಿಳಿಸುವಂತೆ ಇದೇ ಸಂದರ್ಭದಲ್ಲಿ ಬೆಂಗಳೂರಿನಿಂದ ಐಜಿಪಿಯವರು ಜೋಗಕ್ಕೆ ಬರುವುದು ತಿಳಿದು ಚಳವಳಿ ಮುಖಂಡನಾದ ನಾನು ಕಾಗೋಡಿನ ಸ್ಥಿತಿಗತಿಯನ್ನು ಅವರಿಗೆ ವಿವರಿಸಿದೆ. ಆದರೆ ಅವರು ಸ್ಪಂಧಿಸಲಿಲ್ಲ. ಈ ಭೇಟಿಯಿಂದಾಗಿ ಏನೋ ಫಲಕಾರಿಯಾಗದೆ ವಾರೆಂಟ್ ಇದ್ದರೂ ತನ್ನನ್ನು ಬಂಧಿಸದೆ ಬಿಟ್ಟದ್ದು ಒಂದು ವಿಶೇಷ ಎಂದು ಗಣಪತಿಯಪ್ಪನವರು ತಿಳಿಸುತ್ತಾರೆ. ಗಣಪತಿಯಪ್ಪನವರು ರೈತರ ಒಂದು ಸಭೆ ಸೇರಿಸಿ ತಾನು ಭೂಗತನಾಗಿ ಉಳಿದು ಚಳವಳಿಗೆ ಕಾರ್ಯನಿರತನಾಗಿರುವಂತೆ ಸಭೆಯಲ್ಲಿ ನಿರ್ಣಯವೊಂದನ್ನು ಕೈಗೊಂಡರು.

ಇದೇ ವೇಳೆ ಅಂದರೆ ದಿನಾಂಕ 17.5.1951ರಂದು ಶಿವಮೊಗ್ಗದ ಸರ್ಕಿಟ್ ಹೌಸ್‌ನಲ್ಲಿ ರೈತ ಪ್ರತಿನಿಧಿಗಳು ಮತ್ತು ಜಮೀನ್ದಾರರ ಪ್ರತಿನಿಧಿಗಳನ್ನು ಸಭೆಗೆ ಆಹ್ವಾನಿಸಿ ಸಂಧಾನ ಏರ್ಪಡಿಸಲು ಜಿಲ್ಲಾಧಿಕಾರಿಗಳಿಂದ ಪತ್ರ ರೈತ ಸಂಘಕ್ಕೆ ರವಾನೆಯಾಯಿತು. ಈ ಸಭೆಗೆ ಸರ್ಕಾರದ ಉನ್ನತಾಧಿಕಾರಿಗಳು ಆಗಮಿಸುತ್ತಾರೆ ಎಂದೂ ತಿಳಿಸಲಾಗಿತ್ತು. ಆಗ ಎರಡು ಕಡೆಯಿಂದ ಆಗಮಿಸಿದ್ದ ಸಭೆಯಲ್ಲಿ ರೈತ ಮುಖಂಡರ ನೇತೃತ್ವವನ್ನು ಕಡಿದಾಳ್ ಮಂಜಪ್ಪನವರು ವಹಿಸಿಕೊಂಡಿದ್ದರು. ಈ ಸಭೆಯಲ್ಲಿ ಅಂತಿಮವಾಗಿ ಕೈಗೊಂಡ ನಿರ್ಣಯಗಳು ಇಂತಿವೆ.

1. ಬಂಧನದಲ್ಲಿರುವ ಸತ್ಯಾಗ್ರಹಿಗಳನ್ನೆಲ್ಲಾ ಬಿಟ್ಟುಬಿಡುತ್ತೇವೆ.

2. ಭೂಮಾಲೀಕರಿಗೆ ಅವರ ಭೂಮಿಯನ್ನು ಹಿಂತಿರುಗಿ ಕೊಟ್ಟು. ರೈತರಿಗೆ ಪುನರ್ವಸತಿಯ ಸೌಲಭ್ಯವನ್ನು ಕಲ್ಪಿಸಿಕೊಡಲಾಗುವುದು.

ರೈತ ಮುಖಂಡತ್ವ ವಹಿಸಿದ್ದ ಕಡಿದಾಳ್ ಮಂಜಪ್ಪನವರು "ಈ ಮೇಲಿನ ಸಲಹೆಗೆ ಏನು ಹೇಳೋಣ ಎಂದು ನಮ್ಮನ್ನೇ ಕೇಳಿದರು. ಸದಾ ನಮ್ಮ ಹಿತವನ್ನೇ ಚಿಂತಿಸುತ್ತಿದ್ದ ಅವರ ಮನಸ್ಸಿಗೆ ನೋವು ಉಂಟುಮಾಡುವುದು ಸಾಧ್ಯವಿರಲಿಲ್ಲ." ಎಂದು ಗಣಪತಿಯಪ್ಪನವರು ತಿಳಿಸುತ್ತಾರೆ. ಇದರಂತೆ ಗೇಣಿದಾರರು ಮತ್ತು ಭೂಮಾಲೀಕರು ತಮ್ಮ ತಮ್ಮಲ್ಲೇ ಹೊಂದಾಣಿಕೆ ಮಾಡಿಕೊಂಡು ಹೋಗಬೇಕು ಎಂದು ಸರ್ಕಾರ ಅವರ ಮಧ್ಯೆ ಏನೂ ಮಾಡಲಾಗುವುದಿಲ್ಲ ಎಂದು ತಿಳಿಸಿತು.

ಈ ಸಭೆಯಿಂದಾಗಿ ಭೂಮಾಲೀಕರಿಗೆ ಗೆಲುವು ಕಂಡಂತಾಯಿತು. ಇತ್ತ ರೈತ ಸಂಘದವರು ಹೋರಾಟದಲ್ಲಿ ಕೊಂಚ ಮೌನವಹಿಸಿದರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ "ರಾಜ್ಯದ

ಸಮಾಜವಾದಿ ಪಕ್ಷದ ನಾಯಕರಾಗಿದ್ದ ಶಾಂತವೇರಿ ಗೋಪಾಲಗೌಡರು ಮತ್ತು ವೈ.ಆರ್.ಪರಮೇಶ್ವರಪ್ಪನವರು ದೇವದೂತರಂತೆ ಬಂದು ತಮ್ಮ ಪಕ್ಷವನ್ನು ಈ ಸತ್ಯಾಗ್ರಹಕ್ಕೆ ತರದೇ ಇದ್ದಿದ್ದರೆ, ತೆಲಂಗಾಣದಲ್ಲಿ ನಕ್ಸಲೀಯರನ್ನು ಧ್ವಂಸ ಮಾಡಿದ ರೀತಿಯಲ್ಲಿ ಸರ್ಕಾರವು ತನ್ನ ಬಲದಿಂದ ಗೇಣಿರೈತರು ತಲೆ ಎತ್ತದಂತೆ ತುಳಿದು ಬಿಡುತಿತ್ತು"ಎಂದು ಗಣಪತಿಯಪ್ಪನವರು ಅಭಿಪ್ರಾಯಪಡುತ್ತಾರೆ.

## ಕಾಗೋಡು ಚಳವಳಿಗೆ ಸಮಾಜವಾದಿ ನಾಯಕರ ಪ್ರವೇಶ

ಭೂಮಾಲೀಕರು ರೈತ ಸಂಘದ ಬಲವನ್ನು ಕುಗ್ಗಿಸಿದ್ದ ಸಂದರ್ಭದಲ್ಲಿ ಸಮಾಜವಾದಿ ಪಕ್ಷದ ಪ್ರವೇಶವಾಯಿತು. ಸಮಾಜವಾದಿ ಪಕ್ಷದ ಪ್ರವೇಶದಿಂದ ಚಳವಳಿಗೆ ಆನೆ ಬಲ ಬಂದಂತಾಯಿತು. ರೈತ ಮತ್ತು ಸಮಾಜವಾದಿಪಕ್ಷ ಎರಡೂ ಒಟ್ಟಾಗಿ ಹೋರಾಟ ನಡೆಸುವ ಒಪ್ಪಂದವಾಯಿತು. ದಿನಾಂಕ 20.5.1951ರಂದು ಸಮಾಜವಾದಿ ನಾಯಕ ಜಿ.ಸದಾಶಿವರಾಯರು ಕಾಗೋಡಿಗೆ ತೆರಳಿ ಕಾಗೋಡು ಒಡೆಯರ ಭೂಮಿಯಲ್ಲಿ ಚಳವಳಿ ಆರಂಭಿಸಿದರು. ಇವರೊಂದಿಗೆ ಐದು ಮಂದಿ ರೈತರೂ ಸಹ ಬಂಧಿತರಾದರು. ಮರುದಿನವೇ ಶಿವಮೊಗ್ಗದ ಎಸ್.ರಾಮಯ್ಯನವರೂ ಸಹ ಕಾಗೋಡಿಗೆ ತೆರಳಿ ಒಡೆಯರ ಭೂಮಿಯಲ್ಲಿ ಚಳವಳಿ ನಡೆಸಿ ರೈತರೊಂದಿಗೆ ಬಂಧಿತರಾದರು.

ಗಣಪತಿಯಪ್ಪನವರು ಕಾಗೋಡಿನಲ್ಲಿ ದಿನಾಂಕ 21.5.1951ರಂದು ಸಭೆಯೊಂದನ್ನು ಏರ್ಪಡಿಸಿದರು. ರೈತರನ್ನುದ್ದೇಶಿಸಿ ಸಮಾಜವಾದಿ ಪಕ್ಷದ ನಾಯಕ ಎಸ್.ಗೋಪಾಲಗೌಡರು ಮತ್ತು ಗಣಪತಿಯಪ್ಪನವರು ಮಾತನಾಡಿ ರೈತರನ್ನು ಚಳವಳಿಗೆ ಹುರಿದುಂಬಿಸಿದರು. ಈ ಸಂದರ್ಭದಲ್ಲಿ ರೈತಸಂಘ ಮತ್ತು ಸಮಾಜವಾದಿ ಪಕ್ಷಗಳೆರಡು ಒಟ್ಟೊಟ್ಟಾಗಿ ಚಳವಳಿ ನಡೆಸಬೇಕೆಂಬ ನಿರ್ಣಯವನ್ನು ಕೈಗೊಳ್ಳಲಾಯಿತು. ಪ್ರತಿದಿನವೂ ಚಳವಳಿ ನಡೆಸಬೇಕೆಂಬ ನಿರ್ಣಯವನ್ನು ಕೈಗೊಳ್ಳಲಾಯಿತು.

ದಿನಾಂಕ 22.5.1951ರಂದು ಗಣಪತಿಯಪ್ಪನವರ ನೇತೃತ್ವದಲ್ಲಿ ಸಭೆ ಸೇರಿ ಕಾಗೋಡು ಭೂಮಿಯಲ್ಲಿ ಸತ್ಯಾಗ್ರಹ ಆರಂಭಿಸಿತು. ಇದನ್ನು ಕಂಡ ಪೊಲೀಸರು ಚಳವಳಿಕಾರರನ್ನೆಲ್ಲಾ ಬಂಧಿಸಿ ಸಾಗರ ಜೈಲಿಗೆ ಕಳುಹಿಸಿದರು.

ಈ ವೇಳೆಗಾಗಲೇ ರೈತ ವರ್ಗದಲ್ಲಿ ಹೋರಾಟದ ಉತ್ಸಾಹ ಕಹಳೆ ಮೊಳಗಿತ್ತು. 5.6.1951ರಂದು ಕೋಲಸಿರ್ಸಿಯಿಂದ ಬಸವಾನಿ ರಾಮಶರ್ಮರ ನೇತೃತ್ವದಲ್ಲಿ ನೂರಾರು ರೈತರು ಚಳವಳಿಗೆ ಆಗಮಿಸಿದರು. ಸತ್ಯಾಗ್ರಹದಲ್ಲಿ ಪಾಲ್ಗೊಂಡು ಇವರೂ ಸಹ ಸಾಗರ ಜೈಲಿನಲ್ಲಿ ಬಂಧಿತರಾದರು. ಇದರೊಂದಿಗೆ ಸಾಗರಕ್ಕೆ ವ್ಯವಸಾಯದ ಪಿರೋಪಕರಣ ಹೊತ್ತೊಯ್ದು ಪ್ರತಿಭಟನೆ ನಡೆಸಲಾಯಿತು. ಇದೇ ಸಂದರ್ಭಕ್ಕೆ ಭೂಮಾಲೀಕರಾದ ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪಗೌಡರು ಮತ್ತು ಚಿತ್ರಟ್ಟೆಹಳ್ಳಿಯ ಭೀಮಣ್ಣನವರೊಡಗೂಡಿ ಸಾಗರದ ಜೈಲಿನಲ್ಲಿದ್ದ ರೈತಮುಖಂಡರನ್ನು ಕಂಡು ಸಂಧಾನದ ಮಾತುಕತೆಗೆ ಬಂದರು. ರೈತ ಮುಖಂಡರು ಇವರ ಒಡಂಬಡಿಕೆಗೆ ಯಾವುದೇ ಒಪ್ಪಿತ ಸೂಚನೆ ನೀಡಲಿಲ್ಲ.

# ಸಮಾಜವಾದಿ ನಾಯಕ ಡಾ.ರಾಮಮನೋಹರ ಲೋಹಿಯಾ ಆಗಮನ

ಕಾಗೋಡಿನಲ್ಲಿ ನಡೆಯುತ್ತಿದ್ದ ಚಳವಳಿಯ ಬಗ್ಗೆ ಮಾಹಿತಿ ಪಡೆಯುತ್ತಿದ್ದ ಡಾ.ಲೋಹಿಯಾರವರು ಈ ಸ್ಥಳಕ್ಕೆ ಧಾವಿಸಿ ಬಂದರು.ಸಾಗರ ತಾಲೂಕಿನ ಕಾಗೋಡಿನಲ್ಲಿ ರೈತ ಚಳವಳಿ ತಾರಕಕ್ಕೇರುತ್ತಿರುವ ಸನ್ನಿವೇಶದಲ್ಲಿ ವಿಶ್ವಶ್ರೇಷ್ಠ ಸಮಾಜವಾದಿ ಚಿಂತಕ, ಡಾ.ರಾಮಮನೋಹರ ಲೋಹಿಯಾರವರು ದಿನಾಂಕ13.6.1951ರಂದು ಆಗಮಿಸಿದರು. ಸಾಗರದ ಜೈಲಿನಲ್ಲಿದ್ದ ರೈತ ಮುಖಂಡರನ್ನು ಕಂಡು ಧೈರ್ಯ ತುಂಬಿದರು. ಆ ದಿನವೇ ಸಾಗರದ ಗಾಂಧಿ ಮೈದಾನದಲ್ಲಿ ರೈತರ ಸಭೆಯನ್ನು ಉದ್ದೇಶಿಸಿ ಮಾತನಾಡಿದರು. ಸರ್ಕಾರ ಮತ್ತು ಜಮೀನ್ದಾರರ ನಿಲುವನ್ನು, ರೈತರ ಮೇಲೆ ನಡೆಯುತ್ತಿದ್ದ ದೌರ್ಜನ್ಯವನ್ನು. ಖಂಡಿಸಿದರು. ಅದೇ ದಿನವೇ ಕಾಗೋಡಿಗೆ ತೆರಳಿ, ಕಾಗೋಡು ಒಡೆಯರ ಭೂಮಿಯ ತಡೆಯನ್ನು ಮುರಿದು ಪ್ರವೇಶ ಮಾಡಿ ಚಳವಳಿ ಆರಂಭಿಸಿದರು. ಡಾ.ಲೋಹಿಯಾರವರನ್ನು ಸಹ ಪೊಲೀಸರು ಬಂಧಿಸಿ ಸಾಗರದ ಜೈಲಿಗೆ ಬಂಧಿಯಾಗುವಂತೆ ಮಾಡಿತು.

ಸಮಾಜವಾದಿ ನಾಯಕ ಗೋಪಾಲಗೌಡರು ಮತ್ತು ಸಂಗಡಿಗರು ಭೂಗತರಾಗಿ ಚಳವಳಿಯನ್ನು ಜೀವಂತವಾಗಿಡಲು ಹಳ್ಳಿಹಳ್ಳಿಗೆ ತೆರಳಿ ರೈತರನ್ನು ಚಳವಳಿಗೆ ಭಾಗವಹಿಸುವಂತೆ ಪ್ರೇರೇಪಣೆ ನೀಡುತ್ತಿದ್ದರು. ಇದೇ ವೇಳೆಗೆ ಬಿಹಾರದಿಂದ ಪ್ರಸಿದ್ಧ ಕಿಸಾನ್ ನಾಯಕ ರಮಾನಂದ ಮಿಶ್ರರವರು 20.6.1951ರಂದು ಸಾಗರಕ್ಕೆ ಆಗಮಿಸಿದರು. ರೈತ

ನಾಯಕರಿದ್ದ ಜೈಲಿಗೆ ತೆರಳಿ ಚಳವಳಿಗೆ ಯಶಸ್ಸನ್ನು ಕೋರಿದರು. ರೈತರನ್ನುದ್ದೇಶಿಸಿ ಸಭೆಯಲ್ಲಿ ಭಾಷಣ ಮಾಡಿದರು.

ಸಮಾಜವಾದಿ ಡಾ.ಲೋಹಿಯಾ ಬಂಧಿಯಾಗಿದ್ದು, ಇತರೆ ರೈತಮುಖಂಡರು ಬಂಧಿತರಾಗಿದ್ದ ವಿಷಯ ತಿಳಿದ ಖ್ಯಾತ ಸಮಾಜವಾದಿ ಚಿಂತಕ, ರಾಷ್ಟ್ರನಾಯಕ ಜಯಪ್ರಕಾಶ ನಾರಾಯಣರು ದಿನಾಂಕ 21.6.1951ರಂದು ಸಾಗರಕ್ಕೆ ಆಗಮಿಸಿದರು. ಈ ಸಮಾಜವಾದಿ ನಾಯಕನಿಗೆ ಸಾಗರದಲ್ಲಿ ಭವ್ಯಸ್ವಾಗತವನ್ನು ನೀಡಲಾಯಿತು. ಸಾಗರದಲ್ಲಿ ಸಾರ್ವಜನಿಕರನ್ನುದ್ದೇಶಿಸಿ ಕಾಗೋಡು ರೈತ ಹೋರಾಟ ಕುರಿತಂತೆ ಮಾತನಾಡಿದರು. ಅದೇ ದಿನವೇ ರೈತ ನಾಯಕರನ್ನು ಸಮಾಜವಾದಿ ಸಂಗಾತಿಗಳನ್ನು ಜೈಲಿನಲ್ಲಿ ಕಂಡು "ನಿಮ್ಮ ಸತ್ಯಾಗ್ರಹದ ವಿಷಯ ದೇಶಕ್ಕೆ ತಿಳಿದಿದೆ. ನೀವು ಹೆದರದೆ ಧೈರ್ಯವಾಗಿ ಹೋರಾಡಿರಿ. ಜಯ ನಿಮಗೆ ಸಿಕ್ಕೇ ಸಿಗುತ್ತದೆ"ಎಂದು ಧೈರ್ಯ ಹೇಳಿದರು.

ಸಮಾಜವಾದಿ ಪಕ್ಷದ ಪ್ರವೇಶದಿಂದ ಕಾಗೋಡು ಚಳವಳಿಯ ಹೋರಾಟದ ತೀವ್ರತೆ ಹೆಚ್ಚಾಗ ತೊಡಗಿದಾಗ ಆಗಿನ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದ ಕೆಂಗಲ್‌ಹನುಮಂತಯ್ಯನವರು ದಿನಾಂಕ 27.6.1951 ರಂದು ಕಾಗೋಡಿಗೆ ಭೇಟಿ ಕೊಟ್ಟು, ಕಾಗೋಡಿನ ಭೂಮಿಯನ್ನು ರೈತರು ವಶಪಡಿಸಿಕೊಂಡಿದ್ದನ್ನು ಕಂಡು ಭೂಮಾಲೀಕರ ಪರ ಅಥವಾ ಸರ್ಕಾರದ ಪರ ಯಾವುದೇ ನಿರ್ಧಾರ ಕೈಗೊಳ್ಳಲಾಗದೆ ವಾಪಸ್ಸಾದರು.

ಭೂಗತರಾಗಿ ಚಳವಳಿಯಲ್ಲಿ ನಿರತರಾಗಿದ್ದ ಸಮಾಜವಾದಿ ಸಂಗಾತಿಗಳನ್ನು ಪೋಲೀಸರು ಪತ್ತೆ ಹಚ್ಚಲು ಯತ್ನಿಸುತ್ತಿದ್ದರು. ದಿನಾಂಕ 4.7.1951 ರಂದು ಗೋಪಾಲಗೌಡರು, ಗಂಡುಗಲಿ, ಬಾ.ಸು.ಕೃಷ್ಣಮೂರ್ತಿ ಇನ್ನಿತರೆ ರೈತ ಪ್ರಮುಖರನ್ನು ಬಂಧಿಸಲಾಯಿತು. ರೈತ ಮುಖಂಡರಾಗಿದ್ದ ಬರಸಿನ ದ್ಯಾವಪ್ಪ,ಮಂಡಗಳಲೆ ರಾಮಾನಾಯ್ಕ ಹಾಗೂ ಇನ್ನಿತರೆ ಮುಖಂಡರನ್ನು ದಿನಾಂಕ 4.7.1951ರಂದು ಪೋಲೀಸರು ಬಂಧಿಸಿದರು. ಬಂಧಿಸುವ ವೇಳೆಯಲ್ಲಿ "ಬುಡನ್ ಶರೀಫ್ ಎಂಬ ಕ್ರೂರಿ ಸಬ್ ಇನ್ಸ್‌ಪೆಕ್ಟರ್ ಸತ್ಯಾಗ್ರಹಿಗಳ ಮೇಲೆ ನಡೆಯಿಸಿದ ಅಮಾನುಷ ಚಿತ್ರಹಿಂಸೆ ಸತ್ಯಾಗ್ರಹ ಕಾಲದಲ್ಲಿ ನಡೆದ ಎಲ್ಲ ದೌರ್ಜನ್ಯಗಳನ್ನು ಮೀರಿಸಿದ ಉದಾಹರಣೆಯಾಯಿತು" ಎಂದು ಗಣಪತಿಯಪ್ಪನವರು ಅಭಿಪ್ರಾಯಪಟ್ಟಿರುತ್ತಾರೆ.

ಗೇಣಿ ರೈತರಲ್ಲಿ ಒಬ್ಬರಾಗಿದ್ದ ಕಡಿದಾಳ್‌ಮಂಜಪ್ಪನವರು ಆಗಿನ ಕಾಂಗ್ರೆಸ್ ಪಕ್ಷದ ಮುಖಂಡರಾಗಿದ್ದರು. ಇವರೂ ಸಹ ಸದಾ ಗೇಣಿ ರೈತರ ಹಿತಚಿಂತಕರಲ್ಲಿ ಒಬ್ಬರಾಗಿದ್ದರು. ದಿನಾಂಕ 7.7.1951 ರಂದು ಸಾಗರಕ್ಕೆ ಭೇಟಿ ನೀಡಿ ರೈತನಾಯಕರನ್ನು ಕಂಡು "ಚಳವಳಿಗೆ

ಯಾವುದೇ ರೂಪದಲ್ಲಿ ಪರಿಹಾರ ದೊರೆಯಲೆಂದು ಆಶಿಸಿದ್ದರು. ಇವರಿಗೆ ಕೇವಲ ಸಂಧಾನ ಮಾರ್ಗವೊಂದೇ ದಾರಿಯಾಗಿತ್ತು". ಎಂದು ಗಣಪತಿಯಪ್ಪನವರು ತಮ್ಮ ಅಭಿಪ್ರಾಯದಲ್ಲಿ ತಿಳಿಸುತ್ತಾರೆ.

ಅಷ್ಟಕ್ಕೂ ನಿಲ್ಲದ ಚಳವಳಿಗೆ ಪ್ರೇರಕರಾಗಿ ಸಾಗರ ತಾಲೂಕಿನ ಎನ್.ಕೆ.ಸೀತರಾಮಯ್ಯಂಗಾರ್‌ರವರು ರೈತರನ್ನು ಉದ್ದೇಶಿಸಿ ಭಾರೀ ಸಭೆಯನ್ನು ನಡೆಸಿದರು. ಸರ್ಕಾರ ಮತ್ತು ಭೂಮಾಲೀಕರ ನಿಲುವನ್ನು ಹಾಗೂ ದೌರ್ಜನ್ಯವನ್ನು ಖಂಡಿಸಿದರು. ಇದೇ ಸಂದರ್ಭವನ್ನು ಹೊಂಚು ಹಾಕಿ ಪೊಲೀಸರು ಅಯ್ಯಂಗಾರ್‌ರವರನ್ನು ಬಂಧಿಸಲು ಯತ್ನಿಸಿ ವಿಫಲವಾದರು. ಇದೇ ವೇಳೆಗೆ ಬೆಂಗಳೂರಿನಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯುತ್ತಿತ್ತು. ದಿನಾಂಕ16.7.1951ರಂದು ಸಾಗರ ತಾಲ್ಲೂಕಿನ ರೈತರು ಬೆಂಗಳೂರಿಗೆ ತೆರಳಿ ಕಾಂಗ್ರೆಸ್ ಸಭೆಯ ಮುಂದೆ ಪ್ರತಿಭಟನೆ ನಡೆಸಿ ಗಮನ ಸೆಳೆದರು.ಇದಲ್ಲದೆ ಸೊರಬ ತಾಲ್ಲೂಕಿನ ರೈತರು ಸಹ ಚಳವಳಿಗೆ ಬೆಂಬಲ ನೀಡಿ, ಕಾಗೋಡಿಗೆ ಹೋಗಿ ಸತ್ಯಾಗ್ರಹ ನಡೆಸಿದರು. ಸಾಗರ ತಾಲ್ಲೂಕಿನಲ್ಲಿ ಪ್ರತಿಭಟನಾ ಮೆರವಣಿಗೆಯನ್ನೂ ಸಹ ನಡೆಸಿದರು.

ಸತತ ಹೋರಾಟದ ಪರಿಣಾಮವಾಗಿ ನ್ಯಾಯದ ಕಣ್ಣು ತೆರೆಯ ತೊಡಗಿತು. ರೈತ ಹೋರಾಟಗಾರರು ಮತ್ತು ಸಮಾಜವಾದಿ ಸಂಗಾತಿ ಸತ್ಯಾಗ್ರಹಿಗಳ ಮೇಲೆ ಸರ್ಕಾರ ಮತ್ತು ಭೂಮಾಲೀಕರು ಜಮೀನಿಗೆ ಅಕ್ರಮವಾಗಿ ಪ್ರವೇಶ ಮಾಡಿದ್ದಕ್ಕೆ ನ್ಯಾಯಾಲಯದಲ್ಲಿ ದಾವೆಯನ್ನು ಹೂಡಿದ್ದರು. ಈ ದಾವೆಯನ್ನು ನ್ಯಾಯಾಲಯ ತಿರಸ್ಕರಿಸಿ ಪ್ರತಿದಿನವೂ ರೈತ ಸತ್ಯಾಗ್ರಹಿಗಳನ್ನು ಬಿಡುಗಡೆ ಮಾಡುತ್ತಾ ಬಂದಿತು. ಬಿಡುಗಡೆಗೊಂಡ ರೈತರನ್ನು ಭೂಮಾಲೀಕರು ತಮ್ಮ ಜಮೀನಿಗೆ ಪ್ರವೇಶ ಮಾಡುವುದನ್ನು ತಡೆಯುವ ಧೈರ್ಯ ಇಲ್ಲವಾಯಿತು.

ದಿನಾಂಕ16.7.1951ರಂದು ಕೆಲ ರೈತ ಪ್ರಮುಖ ನಾಯಕರಿಗೆ ಮುಚ್ಚಳಿಕೆ ಬರೆಸಿಕೊಳ್ಳುವುದರ ಮೂಲಕ ನ್ಯಾಯಾಲಯು ಬಿಡುಗಡೆಗೆ ಅನುವು ಮಾಡಿಕೊಟ್ಟಿತು.ಚಳವಳಿಯ ಎಲ್ಲಾ ನಾಯಕರನ್ನು ನ್ಯಾಯಾಲಯ ಬಿಡುಗಡೆಗೊಳಿಸಿತು.

ಕಾಗೋಡು ಚಳವಳಿಯ ಪ್ರೇರಕ ಶಕ್ತಿಯಾಗಿ ಆಗಮಿಸಿದ್ದ ಪ್ರಸಿದ್ಧ ಸಮಾಜವಾದಿ ಚಿಂತಕ ಡಾ.ರಾಮಮನೋಹರ ಲೋಹಿಯಾ, ಗೋಪಾಲಗೌಡರು, ಚಳವಳಿಯ ರೂವಾರಿ ಗಣಪತಿಯಪ್ಪ,ಸಿ.ಜಿ.ಕೆ.ರೆಡ್ಡಿ,ಖಾದ್ರಿಶಾಮಣ್ಣ, ರಮಾನಂದ ಮಿಶ್ರ, ಮುಲ್ಕಾಗೋವಿಂದರೆಡ್ಡಿ

ಇನ್ನೂ ಅನೇಕ ಸಂಗಾತಿಗಳು ಈ ಚಳವಳಿಯಲ್ಲಿ ಭಾಗವಹಿಸಿ ಇಡೀ ರಾಷ್ಟ್ರದ ಗಮನಸೆಳೆದು ಚಳವಳಿ ಯಶಸ್ಸಾಗಲು ಕಾರಣರಾದರು.

ಈ ಚಳವಳಿಯ ಫಲವಾಗಿ ಭೂಸುಧಾರಣಾ ಶಾಸನ ರಚಿಸಲು ಕಾರಣವಾಯಿತು. ಕಾಗೋಡು ಚಳವಳಿ ಕರ್ನಾಟದಾದ್ಯಂತ ಆವರಿಸಿಕೊಂಡು ನಾಡಿನ ಸಾಂಸ್ಕೃತಿಕ ಲೋಕದ ಮೇಲೆ ಪರಿಣಾಮ ಬೀರಿ ಸಾಹಿತ್ಯ ಸೃಷ್ಟಿಗೂ ಕಾರಣವಾಯಿತು. ನಾಡಿನಲ್ಲಿ ರಾಜಕೀಯ ದಿಕ್ಕನ್ನು ಬದಲಿಸುವಂತ ಪರಿಣಾಮಕಾರಿ ಚಳವಳಿಯಾಯಿತು. ಈ ನಾಡಿಗೆ ಉತ್ತಮ ನಾಯಕತ್ವವನ್ನು ಕಟ್ಟಿಕೊಟ್ಟ, ವೇದಿಕೆಯಾಗಿ ಕಾಗೋಡು ಚಳವಳಿ ರೂಪಗೊಂಡಿತು. ಜನಸಾಮಾನ್ಯರ ಆಶೋತ್ತರಗಳ ದನಿಯಾಗಿ ಈ ಚಳವಳಿ ರೂಪಗೊಂಡಿತು. ಜಾಗತಿಕ ಸಂದರ್ಭದಲ್ಲಿ ಇಂತಹ ಚಳವಳಿಯಂತೆ ಹರಳುಗಟ್ಟುವ ಕಾಲವಾಗಬೇಕಾಗಿದೆ. ಇಂತಹ ಸೈದ್ಧಾಂತಿಕ ಕಾರಣದಿಂದಲೇ ಒಂದು ಶಾಂತಿಯುತ ಚಳವಳಿ ನಡೆದು ನಾಡಿನಲ್ಲಿ ಹೊಸ ಆಯಾಮ ಒದಗಿಸಿಕೊಟ್ಟ, ಕೇಂದ್ರ ಬಿಂದು ಕಾಗೋಡು ಗ್ರಾಮವಾಗಿದೆ. ನಾಡಿನ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಪ್ರಜ್ಞೆಯಾಗಿ ರೂಪಗೊಂಡಿದ್ದು ಕಾಗೋಡು ಗ್ರಾಮ ಎಂಬುದನ್ನು ಇಲ್ಲಿ ದಾಖಲಿಸಬೇಕಾಗಿದೆ.



# ಕಾಗೋಡು ಚಳವಳಿಯ ನಂತರ

ಕಾಗೋಡು ಚಳವಳಿ ಒಂದು ಯಶಸ್ವಿ ಶಾಂತಿಯುತ ಚಳವಳಿ ಎಂದು ಕೊಂಡರೂ ಕೆಲವು ಪ್ರಶ್ನೆಗಳನ್ನು ಹುಟ್ಟು ಹಾಕಿದೆ. ಇಂತಹ ತಾತ್ವಿಕ ಆಶಯವುಳ್ಳ ಪ್ರಶ್ನೆಗಳು ಸೃಜನಾತ್ಮಕ ಮನಸ್ಸುಗಳಿಗೆ ಕಾಡದೆ ಇರದು. ಕಾಗೋಡು ಚಳವಳಿ ನಿಜವಾಗಿ ಯಾವುದರ ವಿರುದ್ಧ ಹೋರಾಟ ಮಾಡಿತು? ಮೇಲ್ವರ್ಗದ ಜನರು ಶೋಷಿಸಿತ್ತಿದ್ದುದರ ವಿರುದ್ಧವಾಗಿತ್ತೇ? ರಾಷ್ಟ್ರೀಯ ಆರ್ಥಿಕ ಕಾರಣವನ್ನಿಟ್ಟುಕೊಂಡು ಚಳವಳಿಯನ್ನು ನಡಸೀತೆ? ಚಳವಳಿಯನ್ನು ಇಡೀ ದೇಶದಾದ್ಯಂತ ಮಾಡಲು ಹೊರಟು ವಿಫಲವಾಯಿತೇ? ಸಾಮಾಜಿಕವಾಗಿ ಒಂದು ಹೊಸ ಆಯಾಮವನ್ನು ಪಡೆಯಿತೆ? ಇಡೀ ದೇಶಕ್ಕೆ ಭೂಸುಧಾರಣೆಗೆ ಮಾದರಿಯಾಯಿತೇ? ಭೂಮಿ ಹಂಚಿಕೆಯನ್ನು ಸಮಾಜವಾದ ಪಕ್ಷ ತನ್ನ ಪ್ರಣಾಳಿಕೆಯನ್ನಾಗಿ ಮಾಡಿಕೊಂಡಿತೇ? ಇಂತಹ ನೂರಾರು ಪ್ರಶ್ನೆಗಳು ಸಹಜವಾಗಿ ನಮ್ಮ ಕಣ್ಣ ಮುಂದೆ ರಾಚುತ್ತವೆ.

ಐವತ್ತರ ದಶಕದಲ್ಲಿ (1951) ಒಂದು ಪುಟ್ಟ ಗ್ರಾಮದಲ್ಲಿ ನಡೆದ ಚಳವಳಿ ಒಂದು ರಾಷ್ಟ್ರೀಯ ಹೋರಾಟವಾಗಿ ರೂಪಗೊಳ್ಳಲು ಹೇಗೆ ವಿಫಲವಾಯಿತು? ಇದಕ್ಕೆ ಅನೇಕ ಕಾರಣಗಳಿರಬಹುದು. ಆದರೆ ಈ ಚಳವಳಿಯ ಪರಿಣಾಮ ಕರ್ನಾಟಕಕ್ಕೆ ತೀವ್ರವಾಗಿಯೇ ಇತ್ತು. ಪರಿಣಾಮವಾಗಿ ಕ್ರಾಂತಿಕಾರಿ ಭೂಸುಧಾರಣಾ ಕಾಯ್ದೆ ಜಾರಿಗೆ ನಾಂದಿಯಾಯಿತು ಎಂಬುದನ್ನು ಮರೆಯುವಂತಿಲ್ಲ. ಆ ಕ್ಷಣಕ್ಕೆ ಭೂಸುಧಾರಣೆ ಆಗದಿದ್ದರೂ ದಶಕಗಳಷ್ಟು ಕಾಲವನ್ನು ಪಡೆದು ಕ್ರಾಂತಿಕಾರಿ ಭೂಸುಧಾರಣೆಗೆ ಕಾರಣವಾಯಿತು. ಆದರೂ ರಾಜ್ಯದಲ್ಲಿ ಸಾವಿರಾರು ಕೃಷಿಕಾರ್ಮಿಕರು ಭೂಹೀನರಾಗಿಯೇ ಜೀವನ ಸಾಗಿಸುತ್ತಿದ್ದಾರೆ.

ಕಾಗೋಡು ಚಳವಳಿಯನ್ನು ಪಟ್ಟಭದ್ರ ಹಿತಾಸಕ್ತಿ, ಅವರ ಪರವಾಗಿದ್ದ ಸರ್ಕಾರ ಚಳವಳಿಯನ್ನು ಒಂದು ರೀತಿಯಲ್ಲಿ ಮಣಿಸಿದ್ದರೂ, ಅಂತಿಮವಾಗಿ ಚಳವಳಿ ಗೆಲುವನ್ನು ಪಡೆದಿತ್ತು ಎಂಬುದನ್ನು ತಾತ್ವಿಕವಾಗಿ ಒಪ್ಪಿಕೊಳ್ಳಬೇಕಾಗಿದೆ.

ಕಾಗೋಡು ಗ್ರಾಮದ ಗೇಣಿದಾರರಾಗಿದ್ದ ದೀವರಿಗೆ ನಿಜವಾಗಿಯೂ ಭೂಮಿ ಸಿಕ್ಕೀತೆ? ಎಂಬ ಪ್ರಶ್ನೆ ಸಂಪೂರ್ಣವಾಗಿ ಉತ್ತರ ದೊರೆಯುವುದಿಲ್ಲ. ಆದರೆ ಅಲ್ಲಿ ಕಂಡುಬಂದ ಸತ್ಯಾಂಶ ಎಂದರೆ ಬಿಟ್ಟಿ ದುಡಿಮೆ ಸಂಪೂರ್ಣವಾಗಿ ಮಾಯವಾಗಿದೆ. ಒಡೆಯರ ಮನೆಯವರು ಇವರನ್ನು ಗೇಣಿಗಾಗಿಯಾಗಲೀ, ಬಿಟ್ಟಿ ದುಡಿಮೆಗಾಗಲೀ ಮಾಡಿಸಲು ಕರೆಯುತ್ತಿಲ್ಲ. ದೀವರು

ಜನಾಂಗದವರೂ ಸಹ ಯಾರು ಹೋಗುತ್ತಿಲ್ಲ . ಒಂದು ರೀತಿಯಲ್ಲಿ ಸಂಪೂರ್ಣವಾಗಿ ನಿಷಿದ್ಧವಾಗಿದೆ.

ಚಳವಳಿಯ ನಂತರದಲ್ಲಿ ಕೆಲವರು ಒಡೆಯರ ಜಮೀನಿಗಾಗಿ ಅರ್ಜಿ ಹಾಕಿಕೊಂಡವರಿಗೆ ಜಮೀನು ಲಭಿಸಿದೆ. ಇನ್ನೂ ಕೆಲವರು ಅಂದರೆ ಕಣಸೆ ಜೆಟ್ಟಿ,ಮುಟಗುಪ್ಪೆ ಕೆರೆಯಪ್ಪ, ಚೊಂಟಿ ಕೆಂಚ,ಸಪಾಜಿ ಜೀರಸಾಯ್ಕರ ಮನೆಯುವರು ಒಡೆಯುರ ಜಮೀನನ್ನು ಕೊನೆಯವರೆಗೂ ಪಡೆಯಲೇ ಇಲ್ಲ. ಇವರು ಸಹ ಚಳವಳಿಯಲ್ಲಿ ಭಾಗವಹಿಸಿದ್ದರು. ಸ್ವಾಭಿಮಾನದ ಕಿಡಿಯಂತಿದ್ದ ಇವರುಗಳು ಎಂದಿಗೂ ಒಡೆಯರ ಜಮೀನು ಪಡೆಯಲಿಲ್ಲ.

ಇಂತಹ ಚಳವಳಿಯೊತ್ತರ ಸಂದರ್ಭವನ್ನು ನಾವು ಇಲ್ಲಿ ಸೂಕ್ಷ್ಮವಾಗಿ ಗಮನಿಸಬಹುದಾಗಿದೆ. ಚಳವಳಿಯ ನಂತರ ಸಾಂಸ್ಕೃತಿಕ,ರಾಜಕೀಯ,ಆರ್ಥಿಕ ಪ್ರಜ್ಞೆಯ ಪಲ್ಲಟಗಳು ನಾಡನ್ನು ರೂಪಿಸಿದ ಬಗೆಯನ್ನು ಸೂಕ್ಷ್ಮವಾಗಿ ಗ್ರಹಿಸಬಹುದಾಗಿದೆ. ಚಳವಳಿಯನ್ನು ಪ್ರಜ್ಞೆಯ ಕೇಂದ್ರವಾಗಿಯೇ ನೋಡುವ ಕ್ರಮ ನಿಜಕ್ಕೂ ಅರ್ಥಪೂರ್ಣ ಎನಿಸುತ್ತದೆ.



# ಇಂದಿನ ಕಾಗೋಡು

ವರದಾ ನದಿ ಕಾಗೋಡು ಗ್ರಾಮದ ಮಗ್ಗುಲಲ್ಲಿ ಹಾದು ಹೋಗುತ್ತದೆ. ಈ ನದಿ ಮಳೆಗಾಲದಲ್ಲಿ ತುಂಬಿ ಹರಿಯುತ್ತದೆ. ಈ ನದಿಯ ಸಹಾಯದಿಂದಲೇ ಇಲ್ಲಿನ ಗೇಣಿ ರೈತರು ಬೆಳೆಯನ್ನು ಬೆಳೆಯುತ್ತಾರೆ. ಇಲ್ಲಿ ಭತ್ತ, ಅಡಿಕೆ, ಮುಂತಾದ ಬೆಳೆಯನ್ನು ಬೆಳೆಯುತ್ತಾರೆ. ಇಲ್ಲಿನ ಕುಟುಂಬಗಳು ಮೊದಲಿಗಿಂತ ಈಗ ಹಿಗ್ಗಿವೆ. ಮನೆಗಳು ಹೆಚ್ಚಾಗಿವೆ. ಇಲ್ಲಿ ಒಂದು ಹಿರಿಯ ಪ್ರಾಥಮಿಕ ಪಾಠಶಾಲೆ ಇದ್ದು ಈ ಭಾಗದ ಮಕ್ಕಳಿಗೆ ಶಿಕ್ಷಣ ಒದಗಿಸುತ್ತಿದೆ. ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವು ಇಲ್ಲಿದೆ. ಮೊದಲಿಗಿಂತ ಈಗ ಹೆಚ್ಚು ಮಂದಿ ವಿದ್ಯಾವಂತರಾಗಿದ್ದಾರೆ. ಕಾಗೋಡು ಗ್ರಾಮವನ್ನು ಬಿಟ್ಟು ಬೇರೆ ಬೇರೆ ಊರುಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಬೇರೆ ಬೇರೆ ಊರುಗಳಲ್ಲಿ ಈಗ ಉದ್ಯೋಗ ಹರಸಿಕೊಂಡು ನೆಲೆಸುತ್ತಿದ್ದಾರೆ. ಮೊದಲಿದ್ದ ಅಜ್ಞಾನ ಅಂಧಕಾರ ಈ ಊರಿನಲ್ಲಿಲ್ಲ. ಈ ಊರಿನ ಗ್ರಾಮದ ಜನತೆಗೆ ರಾಜಕೀಯ ಪ್ರಜ್ಞೆ ಬಂದಿದೆ. ಈ ಊರಿನ ಗ್ರಾಮಸ್ಥರು ಮೂಲ ಸೌಕರ್ಯಗಳಾದ ಶಿಕ್ಷಣ,ವಸತಿ,ಆಹಾರ ,ವೈದ್ಯಕೀಯ ಸೌಲಭ್ಯ ಪಡೆಯುತ್ತಿದ್ದಾರೆ.

ಈ ಗ್ರಾಮದ ಹಿರಿಯರನ್ನು ಸಂದರ್ಶಿಸಿದಾಗ ತಿಳಿದು ಬಂದ ವಿಷಯವೆಂದರೆ ನಮಗೆ ಲಭ್ಯವಿರುವ ಭೂಮಿ ನಮಗೆ ಸಾಕಾಗಾಲ್ಲ ಎಂದು ತಿಳಿದು ಬಂದಿತು. ಸ್ವಲ್ಪ ಪ್ರಮಾಣದ ಭೂಮಿ ಮಾತ್ರ ತಮಗೆ ಲಭ್ಯವಾಗಿದೆ ಎಂದು ವಿಷಾಧದಿಂದ ತಿಳಿಸುತ್ತಾರೆ.ಕೆಲವರಿಗೆ ಭೂಮಿಯೇ ದೊರಯಲೇ ಇಲ್ಲ ಎಂದು ತಿಳಿಸುತ್ತಾರೆ.

ಈ ಊರಿಗೆ ಇದೀಗ ಸಾರಿಗೆ ವ್ಯವಸ್ಥೆಯಿದೆ. ಸರ್ಕಾರವ ಬಸ್ಸುಗಳು ಈ ಊರಿಗೆ ಬಂದು ಹೋಗುತ್ತಿವೆ. ಆಧುನಿಕವಾದ ಗೃಹೋಪಕರಣಗಳನ್ನು ಈ ಊರಿನಲ್ಲಿ ಸರ್ವೇ ಸಾಮಾನ್ಯವೆಂಬ ರೀತಿಯಲ್ಲಿ ಬಳಸುತ್ತಿರುವುದನ್ನು ಕಾಣಬಹುದಾಗಿದೆ. ಮೊದಲಿದ್ದ ದೀವರ ಜೀವನ ಕ್ರಮ ಚಳವಳಿ ನಂತರದಲ್ಲಿ ಸುಧಾರಿಸಿದೆ.

ದೀವರಲ್ಲಿ ಕುಟುಂಬಗಳು ಬೆಳೆದಂತೆ ವಿವಾಹವಾಗಿ, ಬೇರೆ ಕುಟುಂಬ ಹೂಡಲುಪಾಲುದಾರರಾಗುವುದು ಇಲ್ಲಿ ಸಹಜವಾಗಿ ಕಾಣಬಹುದಾಗಿದೆ. ಬೇರೆ ಸಂಸಾರ ಹೂಡುವುದು ಮೊದಲಿನಿಂದಲೂ ಇಲ್ಲಿ ಜಾರಿಗೊಂಡಿರುವ ಪದ್ಧತಿಯಾಗಿದೆ. ಇದರ ಪರಿಣಾಮವಾಗಿ ಭೂಮಿಯನ್ನು ಹೋಳು ಹೋಳು ಮಾಡುವುದರಿಂದ ಉತ್ಪಾದಕತೆ ಪ್ರಮಾಣದಲ್ಲಿ ಆದಾಯ ಇಳಿಕೆ ಕಂಡು ಬರುತ್ತಿದೆ. ಮೊದಲಿದ್ದ ಭೂಮಿಯ ಮೇಲಿನ

ಪ್ರೀತಿ ಒತ್ತಾಸೆಗಳು ಆರ್ಥಿಕ ಕಾರಣಗಳಿಗೆ ಕಡಿಮೆಯಾಗುತ್ತಾ ಬರುತ್ತಿವೆ. ಭೂಹೋರಾಟದ ಸಾಕಾರ ರೂಪವಾಗಿದ್ದ ಕಾಗೋಡು ಗ್ರಾಮದ ಜನತೆ. ಅನೇಕ ಉಪ ಕಸುಬುಗಳ ಹುಡುಕಾಟದಲ್ಲಿವೆ. ಗೇಣಿದಾರ ಇಂದು ವಿದ್ಯಾವಂತನಾಗಿ ,ಶಿಕ್ಷಕ,ಬಡಗಿ, ಕಮ್ಮಾರ, ತಂತ್ರಜ್ಞ, ಮುಂತಾದ ವೃತ್ತಿಯನ್ನು ಆರಿಸಿಕೊಂಡಿದ್ದಾನೆ.ನಗರದ ಬದುಕಿಗೆ ಮಾರುಹೋಗಿ ಅನೇಕ ವಿದ್ಯಾವಂತರು ನಗರದಲ್ಲಿ ವಾಸಿಸುತ್ತಿದ್ದಾರೆ.

ಕಾಗೋಡು ಗ್ರಾಮದ ಜನತೆ ಬರೀ ರೈತರಾಗಿ ಉಳಿದಿಲ್ಲ.ಆಧುನಿಕತೆಯ ಸಂಕೇತವಾಗಿದ್ದಾರೆ. ಆಧುನಿಕತೆಯ ಪ್ರವೇಶದಿಂದಾಗಿ ಗೇಣಿದಾರ ಬದಲಾಗಿದ್ದಾನೆ. ಸಾಂಸ್ಕೃತಿಕ ಅರಿವು ಅರಳಿ ತಮ್ಮ ನೈಜ ಕಲೆಗಳಾದ ಹಚ್ಚೆ, ದೀವರ ಮಹಿಳೆಯಲ್ಲಿದ್ದ ಚಿತ್ರಕಲೆಯನ್ನು ಆತ್ಮವಿಶ್ವಾಸದಿಂದ ಅಭಿವ್ಯಕ್ತಿಗೊಳಿಸುತ್ತಿದ್ದಾನೆ. ಇಂತಹ ಸಾಂಸ್ಕೃತಿಕ ಲೋಕದ ವಿಸ್ಮಯವನ್ನು ಮನಬಿಚ್ಚಿ ತೆರೆದಿಡುತ್ತಿದ್ದಾನೆ.

ಬುಡಕಟ್ಟು ಮಹಿಳೆಯರ ಕುರಿತಂತೆ ಸರ್ಕಾರವು ವಿಶೇಷ ಆಸಕ್ತಿವಹಿಸಿ ಅವರ ಆಚಾರ ವಿಚಾರಗಳನ್ನು ದಾಖಲಿಸುವ,ಮದುವೆಯ ಸೋಬಾನೆ ಪದಗಳು ಮುಂತಾದ ಜಾನಪದ ಸಂಗತಿಗಳನ್ನು ದಾಖಲಿಸುವ ಕಾರ್ಯಕ್ರಮ ರೂಪಿಸಿದೆ.ಈ ಭಾಗಕ್ಕೆ ಅನೇಕರು ಸಂಶೋಧಕರು ಬಂದು ಇವರ ಜೀವನ ಕ್ರಮವನ್ನು ಅಭ್ಯಾಸ ಮಾಡುತ್ತಿದ್ದಾರೆ.

ಈ ಜನಾಂಗ ಕುರಿತು ವಿಶ್ವವಿದ್ಯಾಲಯಗಳು ವಿಶೇಷ ಆಸಕ್ತಿ ತಳೆದು ಅಧ್ಯಯನ ನಡೆಸಿವೆ. ಗೇಣಿದಾರನಲ್ಲಿದ್ದ ಕೀಳಿರಿಮೆಯಿಂದ, ಹೊರಬಂದು ಸ್ವಾಭಿಮಾನದ ಪ್ರತೀಕವಾಗಿ ನಿಂತಿದ್ದಾನೆ. ಸಾಂಸ್ಕೃತಿಕ ಎಚ್ಚರ, ರಾಜಕೀಯ ಪ್ರಜ್ಞೆ, ಸಾಮಾಜಿಕ ಪ್ರಜ್ಞೆಯ ಆತ್ಮವಿಶ್ವಾಸದಿಂದ ಬೀಗುತ್ತಿದ್ದಾನೆ.

ಈ ಚಳವಳಿಯಿಂದಾಗಿ ನಾಡಿನಲ್ಲಿ ಅನೇಕ ನಾಯಕತ್ವಗಳು ಹುಟ್ಟಿಕೊಂಡವು. ಶಾಂತವೇರಿ ಗೋಪಾಲಗೌಡರಂಥ ದೊಡ್ಡ ನಾಯಕತ್ವವನ್ನು ನಾಡಿಗೆ ಬಳುವಳಿಯಾಗಿ ನೀಡಿದ್ದು ಈ ಚಳವಳಿ. ಈ ನೆಲದಿಂದಲೇ ಎದ್ದು ಬಂದ ಶ್ರೀ ಕಾಗೋಡು ತಿಮ್ಮಪ್ಪನವರು ಮಾದರಿಯಾಗಿ ಚಳವಳಿಯ ಆಶಯಕ್ಕೆ ಜೀವತುಂಬಿರುವುದು ವಿಶೇಷವೇ ಸರಿ.



# ಜಮೀನ್ದಾರರ ಪರವಾಗಿ ಮಾತನಾಡಿದ ಚರ್ಚೆ

## 26ನೇ-ಅಕ್ಟೋಬರ್1951

ಟಿ.ಮಾದಯ್ಯಗೌಡರು(ಬೆಂಗಳೂರ ಜಿಲ್ಲೆ)ಸ್ವಾಮಿ, ಈ ಮಸೂದೆಯನ್ನು ವಿಮರ್ಶೆ ಮಾಡುವುದಕ್ಕೋಸ್ಕರವಾಗಿಯೇ ಒಂದು ಸಮಿತಿಯನ್ನು ಏರ್ಪಾಡು ಮಾಡಲಾಗಿತ್ತು. ಆ ಸಮಿತಿಯವರು ಬಹಳ ಕೂಲಂಕಷವಾಗಿ ಎಲ್ಲಾ ಅಂಶಗಳನ್ನೂ ಚರ್ಚೆ ಮಾಡಿ, ಈಮಸೂದೆಯನ್ನು ಒಂದು ಉತ್ತಮ ರೂಪಕ್ಕೆ ತಂದು ಅದನ್ನು ಸರ್ವರೂ ಅನುಮೋದಿಸಲು ಅನುಕೂಲವಾಗುವಂತೆ ಮಾಡಿ ಅದನ್ನೀಗ ಸಭೆಯ ಮುಂದೆ ಮಂಡಿಸಲು ಯೋಗ್ಯವಾದುದನ್ನಾಗಿ ಮಾಡಿರತಕ್ಕದ್ದು ನಾವೆಲ್ಲಾ ಹೆಮ್ಮೆ ವಿಚಾರವಾಗಿತ್ತೆಂದು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ. ಆ ಸಮಿತಿಯ ಮಾನ್ಯ ಅಧ್ಯಕ್ಷರು ಬಹಳ ತಾಳ್ಮೆಯಿಂದ ಮತ್ತು ಶಾಂತಿಯಿಂದ ಪ್ರತಿಯೊಬ್ಬರೂ ಕೊಡತಕ್ಕ ಅಭಿಪ್ರಾಯಗಳನ್ನು ಅವು ಒಳ್ಳೆಯದಾಗಿರಲಿ, ಇಲ್ಲದಿರಲಿ, ಎಲ್ಲವನ್ನೂ ತೆಗೆದುಕೊಂಡು ನಿಧಾನವಾಗಿ ಪ್ರತಿಯೊಂದು ಅಂಶವನ್ನೂ ದೀರ್ಘವಾಗಿ ಆಲೋಚಿಸಿ ನಮ್ಮ ದೇಶಕ್ಕೆ ಹೇಗಿದ್ದರೆ ಅನುಕೂಲವಾಗುತ್ತದೋ ಅದಕ್ಕನುಗುಣವಾಗಿರುವಂತೆಯೇ ಮತ್ತು ನಿಜವಾಗಿಯೂ ನಮ್ಮ ದೇಶದ ರೈತ ಮತ್ತು ಜಮೀನ್ದಾರರಿಬ್ಬರಿಗೂ ಅನುಕೂಲವಾಗಿರುವಂತೆ ಈ ಬಿಲ್ಲನ್ನು ತಯಾರಿಸುವುದರಲ್ಲಿ ಬಹಳ ಶ್ರಮಪಟ್ಟಿದ್ದಾರೆ. ಈ ಬಿಲ್ಲಿನಲ್ಲಿ ಈ ಉಭಯಪಾರ್ಟಿಗಳ ಯೋಗಕ್ಷೇಮಕ್ಕೆ ಏನೇನು ಮಾರ್ಪಾಡುಗಳನ್ನು ಮಾಡಬೇಕಾಗಿತ್ತೋ ಅವುಗಳೆಲ್ಲವನ್ನೂ ಮಾಡಿದ್ದಾರೆ. ಮೈಸೂರು ದೇಶಕ್ಕೆ ಈ ಮಸೂದೆ ಎಷ್ಟರಮಟ್ಟಿಗೆ ಅವಶ್ಯಕವಾಗಿತ್ತೋ ಅಷ್ಟರಮಟ್ಟಿಗೆ ಇದನ್ನು...

ಅಧ್ಯಕ್ಷರು-ತಾವು ಈಗ ಅದೆಲ್ಲವನ್ನೂ ಹೇಳಬೇಕಾಗಿಲ್ಲ.

ಶ್ರೀ ಟಿ.ಮಾದಯ್ಯಗೌಡರು- ನಮ್ಮದೇಶದಲ್ಲಿ ವ್ಯವಸಾಯಗಾರರಿಗೂ ಮತ್ತು ಜಮೀನ್ದಾರರಿಗೂ ಒಂದು ಒಳ್ಳೆಯ ಸಂಪರ್ಕವೇರ್ಪಟ್ಟು ಎರಡು ಪಕ್ಷಗಳಿಗೂ ಯಾವ ಘರ್ಷಣೆಗೂ ಅವಕಾಶವಿಲ್ಲದಿರುವ ರೀತಿಯಲ್ಲಿ ಇದನ್ನು ಮಾಡಲಾಗಿದೆ. ಆದರೆ ಇದೇ ರೀತಿಯಾಗಿ ನಮ್ಮ ದೇಶದಲ್ಲಿ ಬಹಳ ಹಿಂದಿನಿಂದಲೂ ವ್ಯವಸಾಯಗಾರನೂ ಮತ್ತೂ ಜಮಿನ್ದಾರನೂ ಯಾವ ಘರ್ಷಣೆಯೂ ಇಲ್ಲದಂತೆ ಬಹಳ ಹೊಂದಾಣಿಕೆಯಿಂದ ನಡೆದುಕೊಂಡು ಬಂದಿದ್ದಾರೆ. ಆದರೆ ಒಂದೆರಡು ಕಡೆ ಇತ್ತೀಚೆಗೆ ರೈತನಿಗೂ ಮತ್ತೂ ಜಮೀನ್ದಾರನಿಗೂ ಉಂಟಾಗಿರತಕ್ಕ ಘರ್ಷಣೆ ಅವರಿಂದಲೇ ಅದು ಉದ್ಭವವೆ ಬೇರೆಯಾರೋ ಅದನ್ನು ತಂದು ಹಾಕಿರುವಂತೆ ನನಗೆ ಭಾಸವಾಗುತ್ತಿದೆ. ಈಸಂಬಂಧವಾಗಿ ಈ ಮಾನ್ಯ ಸಭೆಯಲ್ಲಿರತಕ್ಕ ನಮ್ಮ ಸಮಾಜವಾದಿಗಳೊಬ್ಬರು ಇದನ್ನೇ ಒಂದು ದೊಡ್ಡದಾಗಿ ಮಾಡಿಕೊಂಡು ಈ ಮಸೂದೆಯು ಸರಿಯಾಗಿಲ್ಲ ಇದನ್ನು ಬದಲಾಯಿಸಬೇಕು ಎಂದು ಮಾತನಾಡಿದ್ದಾರೆ.

# Mysore Tenancy Bill,1951

## 5 th November 1951

## ಕಾಯ್ದೆಯ ಮೇಲೆ ಚರ್ಚೆ ಶ್ರೀ ಕಡಿದಾಳ್ ಮಂಜಪ್ಪನವರು.

ಮಾನ್ಯ ಶ್ರೀ ಎಚ್.ಸಿದ್ದಯ್ಯನವರು-ಆರನೆಯ ಕ್ಲಾಜಿನ ಎರಡನೆಯ ಸಬ್ ಕ್ಲಾಜು ನೋಡಿ.It Fixes a lower rate

ಶ್ರೀ ಕಡಿದಾಳ್ ಮಂಜಪ್ಪನವರು-ಪರಮಾವಧಿಯ ಗೇಣಿ ಕಡಿಮೆ ಮಾಡುವ ಅಧಿಕಾರ ಸರ್ಕಾರದವರಿಗಿದೆ. ಆಮೇಲೆ ಈ ಗೇಣಿದಾರರ ಕಾನೂನು ಸರ್ಕಾರದಿಂದ ಗೇಣಿಗೆ ತೆದೆಗುಕೊಂಡ ಜಮೀನಿಗೆ ಅನ್ವಯಿಸುವುದಿಲ್ಲ ಎಂದು 48ನೆಯ ಕ್ಲಾಜಿನಲ್ಲಿ ವಿದಿತವಾಗಿದೆ. ಅಲ್ಲಿ ಈ ರೀತಿ ಹೇಳಿದೆ.

Original Clause 51 reads like this "Nothing in the foregoing Provisions of this Act shall apply-

"(a)to lands he d on lease from the Government or the Central Government a local authorityor a co operative Society registered or deemed to be registered under the Mysore Co-operative Societies Act,1918.........

ಸ್ವಾಮಿ, ಇದರಿಂದ ಮಲೆನಾಡಿನ ರೈತರಿಗೆ ಬಹಳ ತೊಂದರೆಯಾಗುತ್ತದೆ. ಮಲೆನಾಡಿನಲ್ಲಿ ತೀರ್ಥಹಳ್ಳಿ, ಕೊಪ್ಪ, ಶೃಂಗೇರಿ, ಸಾಗರ ಮುಂತಾದ ತಾಲ್ಲೂಕುಗಳ ಬಹಳ ಭಾಗದ ಜಮೀನು ಮಠಗಳಿಗೆ ಸೇರಿ ಅವುಗಳಲ್ಲಿ ಬಹು ಭಾಗದ ಸಂಸ್ಥೆಗಳು ಸರ್ಕಾರದ ಆಡಳಿತಕ್ಕೊಳಪಟ್ಟಿವೆ.

ಸರ್ಕಾರದವರು ಮುಜರಾಯಿ ಸಂಸ್ಥೆಗಳಿಗೆ ಸೇರಿದ ಜಮೀನನ್ನು ಗೇಣಿಗೆ ಕೊಟ್ಟಿರುವುದಕ್ಕೆ ಈ ಕಾನೂನುಅನ್ವಯಿಸುವುದಿಲ್ಲ ಎಂದರೆ ರೈತನಿಗೆ ಅದರಲ್ಲೂ ಮಲೆನಾಡಿನ ರೈತನಿಗೆ ಯಾವ ಪ್ರಯೋಜನವೂ ದೊರಕುವುದಿಲ್ಲ. ಆದ್ದರಿಂದ ಈ ತಿದ್ದುಪಡಿಯನ್ನುಸೂಚಿಸಿದ್ದೇನೆ. ಸರ್ಕಾರಕ್ಕೆ ಸೇರಿದ ಜಮೀನಿಗೆ ಮಾತ್ರ ಈ ಮಸೂದೆ ಅನ್ವಯಿಸದೆ ಇರುವುದರಲ್ಲಿ ಅಡ್ಡಿಯಿಲ್ಲ. ಆದರೆ ಗೇಣಿಗೆ ಕೊಟ್ಟ ಎಲ್ಲಾ ಜಮೀನುಗಳಿಗೂ ಇದು ಅನ್ವಯಿಸುವುದಿಲ್ಲ. ಎಂಬುದನ್ನು ನಾನು ಒಪ್ಪುವುದಿಲ್ಲ. ಒಟ್ಟಿನಲ್ಲಿ ಈ ಮಸೂದೆ ಸರ್ವಸಮರ್ಪಕವಾಗಿದೆ ಎಂದು ಹೇಳಲಿಕ್ಕಾಗುವುದಿಲ್ಲ. ಗೇಣಿದಾರರ ಪರವಾಗಿ ಟೀಕೆ ಮಾಡುವವರಿಗೂ ಬೇಕಾದಷ್ಟು ಅವಕಾಶವಿರಬಹುದು. ಆದಾಗ್ಯೂ ಕೂಡ ಕೆಲವು ನಿಬಂಧನೆಗಳಿಂದ ರೈತನಿಗೆ ಪ್ರಯೋಜನವಾಗಿದೆ. ಅಷ್ಟೇ ಪ್ರಯೋಜನ ಜಮೀನ್ದಾರನಿಗೂ ಲಭಿಸುತ್ತಾ ಇದೆ. ನಾನು ಮೊದಲೇ ಅರಿಕೆ ಮಾಡಿಕೊಂಡ ಹಾಗೆ ಈ ಕಾನೂನು ಜಾರಿಗೆ ಬಂದ ನಂತರ ಅನುಭವವನ್ನು ಕ್ರೋಢೀಕರಿಸಿ ಮಸೂದೆಯಲ್ಲಿ ಸೂಕ್ತ ಬದಲಾವಣೆ ಮಾಡಬೇಕಾಗುತ್ತದೆ.ಈ ಎಲ್ಲಾ ಕಾರಣಗಳಿಂದ ಈ ಕಾನೂನು ಆಗುವುದು ಅತ್ಯಾವಶ್ಯಕ ಎಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಕಾಯ್ದೆ ಕುರಿತು ಶ್ರೀ ಮುಲ್ಕಾ ಗೋವಿಂದರೆಡ್ಡಿಯವರ ಚರ್ಚೆ

## 5ನೇ ನವೆಂಬರ್, 1951

ಶ್ರೀ ಎಂ.ಗೋವಿಂದರೆಡ್ಡಿ (ಚಿತ್ರದುರ್ಗ)-ಸ್ವಾಮಿ ನಾನು ಈ ವಿಚಾರವಾಗಿ ಮಾತನಾಡಬೇಕೆಂದಿರಲಿಲ್ಲ. ಏಕೆಂದರೆ ಈ ಮಸೂದಾ ಕಾನೂನು ಬಹಳ ದೀರ್ಘವಾಗಿ ಚರ್ಚೆಯಾಗಿದೆ. ಆದರೆ ಶ್ರೀರಂಗರಾಮಯ್ಯನವರು ಮತ್ತು ಇತರರು ಕೆಲವರು ಮಾತನಾಡಿದ ಮೇಲೆ ಒಂದು ತಪ್ಪಭಿಪ್ರಾಯ ಉಂಟಾಗಬಹುದೆಂದು ಕಂಡು ಬಂದುದರಿಂದ ಅದನ್ನು ನಿವಾರಣೆ ಮಾಡಬೇಕೆಂಬ ಉದ್ದೇಶದಿಂದ ಮಾತನಾಡುತ್ತಿದ್ದೇನೆ. ಶ್ರೀ ರಂಗರಾಮಯ್ಯನವರು ಮಾತನಾಡುವಾಗ ರೈತರ ರಕ್ಷಣೆಗಾಗಿ ಈ ಮಸೂದಾಕಾನೂನು ಜಾರಿಗೆ ಬಂದರೆ ರಾಜ್ಯಾಂಗದ ಪ್ರಕಾರ ಎಲ್ಲರಿಗೂ ತಮ್ಮ ತಮ್ಮ ಆಸ್ತಿಗಳನ್ನಿಟ್ಟುಕೊಂಡು ಅನುಭವಿಸಿಕೊಂಡು ಹೋಗುವುದಕ್ಕೆ ಏನು ಅವಕಾಶವಿದೆಯೋ ಅದಕ್ಕೆ ತೊಂದರೆಯಾಗುತ್ತದೆ. ನಾವು ನಮ್ಮ ಆಸ್ತಿಗಳನ್ನು ಯಾವ ರೀತಿ ಬೇಕಾದರೂ ಉಪಯೋಗಿಸಲು ಸ್ವಾತಂತ್ರ್ಯವಿದೆ.ಅದರಿಂದ ಯಾವ ಸರ್ಕಾರವೇ ಆಗಲಿ ಇದನನು ತಡೆಗಟ್ಟಲು ಸಾಧ್ಯವಿಲ್ಲ ಎಂಬ ವಾದ ಮಸೂದಾಕಾನೂನು ರೈತರಿಗೆ ಅನೇಕ ಹಕ್ಕುಗಳನ್ನು ಕೊಡುವುದಾಗಿಯೂ ಮತ್ತು ಜಮೀನುದಾರರಿಗೆ ಅನಾನುಕೂಲ ಮಾಡುವುದಾಗಿಯೂ ಕಂಡು ಬರುತ್ತದೆ. ಆದರೆ ಈ ಕಾನೂನು ಜಾರಿಗೆ ಬಂದರೆ ಜಮೀನ್ದಾರರಿಗೂ ಹೆಚ್ಚು ಅನುಕೂಲವಾಗುವುದಿಲ್ಲ. ರೈತರಿಗೆ ಕೂಡ ಬಹಳ ತೊಂದರೆ ಮತ್ತು ಅನಾನುಕೂಲವಾಗುತ್ತದೆ. ಎಂಬ ವಾದಸರಣಿಯನ್ನು ಅನುಸರಿಸಿದರು. ಅದಕ್ಕಾಗಿ ನಾನು ವ್ಯಥೆಪಡಬೇಕಾಗಿದೆ. ಈ ಮಸೂದಾ ಕಾನೂನಿನ ಅವಶ್ಯಕತೆಯಿದೆಯೇ ಎಂದು ಪ್ರಶ್ನೆಸಹ ಮಾಡಿದ್ದಾರೆ. ಬೊಂಬಾಯಿ, ಉತ್ತರ ಪ್ರಾಂತ,ಬಂಗಾಳ,ಹೈದರಾಬಾದ್ ಮುಂತಾದ ದೇಶಗಳಲ್ಲಿ ಕಾನೂನಿನ ಅವಶ್ಯಕತೆ ಎಷಟು ಹೆಚ್ಚಾಗಿದೆಯೋ ಅಷ್ಟು ಅವಶ್ಯಕತೆ ನಮ್ಮ ಸಂಸ್ಥಾನದಲ್ಲಿಲ್ಲ ಎಂದುಹೇಳಿದರೆ ಅದನ್ನು ಒಪ್ಪಿಕೊಳ್ಳಬಹುದು. ಏಕೆಂದರೆ ಮೈಸೂರು ಸಂಸ್ಥಾನದಲ್ಲಿ ಬಹಳ ಭಾಗ ಬೈಲು ಸೀಮೆ.ಅದೂ ಅಲ್ಲದೆ ಅಲ್ಲಿರುವ ಜಮೀನ್ದಾರಿ ಪದ್ಧತಿ ಇಲ್ಲಿಲ್ಲ. ಈ ಭೂಸ್ವಾಮ್ಯತ್ವ ಇಲ್ಲಿಲ್ಲ.ಇಲ್ಲಿ ಸಮಾನ್ಯವಾಗಿ ರೈತವಾರಿ ಪದ್ಧತಿಯಿರುವುದರಿಂದ ಜಮೀನುಗಳು ಒಂದು ಮಿತವಾದ ಸಂಖ್ಯೆಯಲ್ಲಿದೆ ಅಲ್ಲಿನಂತೆ ಹೆಚ್ಚಿನ ಸಂಖ್ಯೆಯಲ್ಲಿಲ್ಲ. ಅನೇಕಗ್ರಾಮಗಳು ಒಬ್ಬರ ವಶದಲ್ಲಿದ್ದು ಜಮೀನ್ದಾರರರ ಇಷ್ಟದ ಪ್ರಕಾರ, ಹುಕುಂ ಪ್ರಕಾರ ನಡೆಯಬೇಕಾದ ಪರಿಸ್ಥಿತಿ ಇಲ್ಲಿಲ್ಲ. ಆದ ಕಾರಣ ಇಂತಹ ಕಾನೂನಿಗೆ ಆ ಪ್ರಾಂತದಲ್ಲಿರುವ ಅವಶ್ಯಕತೆ ಇಲ್ಲಿ ಇಲ್ಲವೆಂದು ಹೇಳುವುದನ್ನು ಒಪ್ಪಬಹುದು. ಆದರೆ ಇಲ್ಲೂ ಕೂಡಾ ಅವರಲ್ಲೂ ಹೆಚ್ಚಾಗಿ ಶಿವಮೊಗ್ಗದಲ್ಲಿ ಮತ್ತು ನಾನಾ ಪ್ರದೇಶಗಳಲ್ಲಿ ಈ ಒಂದು ಮಸೂದಾ ಕಾನೂನು, ರೈತರ ಹಿತರಕ್ಷಣೆ ಮಾಡುವ ಮಸೂದಾ ಕಾನೂನು, ಅವಶ್ಯಕವಾಗಿದೆಯೆಂದು ಹೇಳಿದರೆ ಅದನ್ನು ಯಾರೂ ಇಲ್ಲ ಎನ್ನುವುದಿಲ್ಲ ಎಂಬುದು ನನ್ನ ಭಾವನೆ.

ರೈತರಿಗೆ ಅನ್ಯಾಯವಾಗುತ್ತಿರವುದೇನು, ರೈತರ ಹಿತರಕ್ಷಣೆ ಮಾಡಬೇಕಾದ ಪ್ರಮೇಯವೇನಿದೆ. ಎಂದು ಶ್ರೀರಂಗರಾಮಯ್ಯನವರು ಪ್ರಶ್ನೆಮಾಡಿದರು. ಎಲ್ಲಾ ಜಮೀನ್ದಾರರೂ ಕೂಡ ರೈತರಿಗೆ ಅನ್ಯಾಯಮಾಡುತ್ತಾರೆಂದು ಯಾರೂ ಹೇಳಲಾರರು. ಅವರಲ್ಲೂ ಜಮೀನ್ದಾರನಿಗೆ ತನ್ನ ಜಮೀನು ಸಾಗಾಗಬೇಕು. ನೆಮ್ಮದಿಯಾದ ಕುಳಗಳಿಗೆ ಸಿಕ್ಕಿ ತನ್ನ ಜಮೀನಿನ ಉತ್ಪತ್ತಿ ಹೆಚ್ಚಬೇಕು. ಎಂಬ ಅಪೇಕ್ಷೆ ಇರುವುದು ಸ್ವಾಭಾವಿಕ, ಆದರೆ ಎಲ್ಲಾ ಜಮೀನ್ದಾರರೂ ಹಾಗಿರುವುದಿಲ್ಲ. ನಮ್ಮ ಚಿತ್ರದುರ್ಗ ಜಿಲ್ಲೆಯಲ್ಲಿ ಎರೆಭೂಮಿ ಮತ್ತು ಹೆಚ್ಚು ಖುಷ್ಕಿ ಜಮೀನಿದ್ದು ಅಲ್ಲಿರುವ ಜಮೀನ್ದಾರರು ರೈತರು ಬಂದರೆ ಸಾಕು, ನಮಗೆ ರೈತರು ಕೊಡಬೇಕಾದ ಗುತ್ತಿಗೆ ತೆಗೆದುಕೊಳ್ಳುವುದನ್ನು ಕಡಿಮೆ ಮಾಡಿ ಇನ್ನೂ ಅವರಿಗೆ ಅನುಕೂಲವಾಡಿ ಮನೆ ವಗೈರೆ ಕಟ್ಟಿಸಿಕೊಟ್ಟು, ಅನುಕೂಲ ಮಾಡೋಣ ಎಂದು ಹೇಳುವವರಿದ್ದಾರೆ. ಅಲ್ಲಿ ರೈತರು ಸಿಕ್ಕುವುದು ದುರ್ಲಭವಾಗಿದೆ. ಏಕೆಂದರೆ ಜಮೀನು ಮಾಡುವವನಿಗೆ ಹೊಟ್ಟೆ ಬಟ್ಟೆಗೆ ಸಾಕಾಗುವಷ್ಟು ಜಮೀನಿನಿಂದ ಬರುವುದಿಲ್ಲ. ಗುತ್ತಿಗೆ ಕೊಡಬೇಕಾದ್ದನ್ನು ಯಜಮಾನನಿಗೆ ಕೊಟ್ಟು ಜೀವನದ ಮಟ್ಟ ಹೆಚ್ಚುತ್ತಿರುವಾಗ ತನಗೆ ಬರುವ ಆದಾಯದಲ್ಲಿ ಜೀವನ ಸಾಗಿಸುವುದು ಕಷ್ಟವಾಗಿದೆ. ಆದ್ದರಿಂದ ಪಟ್ಟಣಗಳನ್ನು ಸೇರಿದರೆ ಅನಾಯಸವಾಗಿ ಮಿಲ್ಲುಗಳು ಮುಂತಾದ ಕಡೆ ಕೂಲಿ ಸಿಕ್ಕುತ್ತದೆ. ಮತ್ತು ರುಚಿ ರುಚಿಯಾದ ಕಾಫಿ ತಿಂಡಿ ತಿನ್ನಲು ಹೊಟೇಲುಗಳಿರುತ್ತವೆ. ಕಣ್ಣಿಗೆ ಬೇಕಾದ ನೋಟ ನೋಡಲು ಸಿನಿಮಾ ಮಂದಿರಗಳಿವೆ. ವಿಹಾರ ಕ್ಷೇತ್ರಗಳಿವೆ. ಅಲ್ಲಿ ಸುಖವಾಗಿ ಇರಬಹುದು. ಎಂದು ಅನೇಕರು ಪಟ್ಟಣಗಳಿಗೆ ಹೋಗುತ್ತಿದ್ದಾರೆ. ಆದ್ದರಿಂದ ಕೆಲವು ಕಡೆ ರೈತರು ಸಿಕ್ಕುವುದು ದುರ್ಲಬ, ಅಂಥ ಕಡೆ ಜಮೀನ್ದಾರರು ರೈತರನ್ನು ಹಿಂಸೆ ಮಾಡಿ ಅವರಿಗೆ ಅನ್ಯಾಯಮಾಡುತ್ತಾರೆಂದರೆ ಯಾರೂ ಒಪ್ಪುವುದಿಲ್ಲ. ಆದರೆ ಶಿವಮೊಗ್ಗ ಮುಂತಾದ ಮಲೆನಾಡು ಪ್ರಾಂತಗಳ ಪರಿಸ್ಥಿತಿಯೇ ಬೇರೆ. ಅಲ್ಲಿ ಬರೀ ಖುಷ್ಕಿಯಲ್ಲದೆ ಹೆಚ್ಚಾಗಿ ತೋಟ ಮತ್ತು ತರಿ ಜಮೀನಿದ್ದು ರೈತರು ತಲತಲಾಂತದಿಂದ ಅವರಿಗಿರುವ ಜಮೀನುಗಳನ್ನು ಸಾಗುಮಾಡಿಕೊಂಡು ಬರುತ್ತಿದ್ದಾರೆ. ಆ ಪದ್ಧತಿಯಿದೆ, ಅಲ್ಲಿನ ರೈತರ ಆರ್ಥಿಕ ಪರಿಸ್ಥಿತಿ ಸಮಾನ್ಯವಾಗಿ ಚೆನ್ನಾಗಿರುವುದಿಲ್ಲ. ಅವರು ತಮ್ಮ ಜೀವನ ಸುಖಮಯವಾಗಿರಬೇಕು. ಖಾಯಿಲೆಗೆ ಔಷಧಿ ತೆಗೆದುಕೊಳ್ಳಬೇಕು ಅಥವಾ ಭಿಕ್ಷೆ ಬೇಡಿ ಜೀವನ ಮಾಡಬೇಕು. ಸಾಧಾರಣವಾಗಿ ರೈತರ ಪರಿಸ್ಥಿತಿ ಹೀಗಿರುವಾಗ ಅದನ್ನು ದುರುಪಯೋಗಪಡಿಸಿಕೊಳ್ಳುವ ಜಮೀನ್ದಾರರು ಮಲೆನಾಡಿನಲ್ಲಿದ್ದಾರೆಂದು ಭೂಕಂದಾಯ ಸುಧಾರಣೆ ಸಮಿತಿಯ ಮುಂದೆ ಗೇಣಿದಾರರ ಸಂಘದ ಪ್ರತಿನಿಧಿಗಳು ಮತ್ತು ರೈತರು ಕೊಟ್ಟ ರುಜುವಾತಿನಿಂದ ವ್ಯಕ್ತವಾಗಿದೆ. ಇಷ್ಟೇ ಅಲ್ಲದೆ ಮಲೆನಾಡಿನಲ್ಲಿ ಏನಾಗಿದೆಯೆಂದರೆ ರೈತರು ಕೊಡುವ ಗುತ್ತಿಗೆ ಏಕ

ಪ್ರಕಾರವಾಗಿಲ್ಲ. ಹಿಂದೆ ಗ್ರಾಮದಲ್ಲೂ ಒಂದು ಪ್ರಕಾರವಾಗಿಲ್ಲ. ಒಂದೇ ಗ್ರಾಮದಲ್ಲಿ ಗುತ್ತಿಗೆ ಹೆಚ್ಚಿಸಿ ತಮ್ಮ ಅನುಕೂಲವನ್ನು ಹೆಚ್ಚಿಸಿಕೊಳ್ಳುವ ಪರಿಸ್ಥಿತಿ ಕೂಡ ಇದೆ. ರೈತರು ಹೆಚ್ಚಾಗಿ ಸಿಗದಿರುವಕಡೆ ರೈತರಿಗೆ ಅನ್ಯಾಯ ಮಾಡದಂತೆ ಇದ್ದಾರೆ. ರೈತರಿಗಿರುವ ಒಂದು ತೊಂದರೆ ಅಧಿಕವಾಗಿ ಕಾಗೋಡು ಸತ್ಯಾಗ್ರಹ ಪ್ರಾರಂಭವಾಗಿ ಅಲ್ಲಿ ರೈತರ ಹಿತರಕ್ಷಣೆ ಮಾಡಬೇಕೆಂದು ಜಮೀನ್ದಾರರಿಗೂ ವಿರಸ ಬಂದು ಆ ವಿಷಯ ಈ ಸಭೆಯ ಗಮನಕ್ಕೆ ಬಂದಿದೆ. ಆದ್ದರಿಂದ ಇಂಥ ಪರಿಸ್ಥಿತಿಯಲ್ಲಿ ರೈತರ ಹಿತರಕ್ಷಣೆ ಮಾಡಬೇಕೆಂದು ಸರ್ಕಾರ ಅಪೇಕ್ಷಿಸಿದರೆ ಅದನ್ನು ಅನ್ಯಾಯವೆಂದು ಯಾರೂ ಭಾವಿಸಬಾರದು.

ಈ ಮಸೂದಾ ಕಾನೂನು ಪ್ರಕಾರ ಜಮೀನ್ದಾರರಿಗೆ ಅನ್ಯಾಯವಾಗಿದೆಯೆಂದು ಹೇಳಬಹುದು. ಈ ದಿವಸ ರೈತರು ಜಮೀನು ಮಾಡಿದರೂ ಜಮೀನು ತಮ್ಮದು ಎಂದು ಹೇಳುವ ಹಾಗಿಲ್ಲ. ಜಮೀನ್ದಾರರನು ಯಾವ ವಿಧವಾದ ನಷ್ಟವನ್ನೂ ಅನುಭವಿಸುವ ರೀತಿಯಲ್ಲಿ ಈ ಕಾನೂನಿನಲ್ಲಿ ಅವಕಾಶ ಮಾಡಿಲ್ಲ. ಜಮೀನ್ದಾರರ ಹಿತ ಮತ್ತು ರೈತರ ಹಿತ ಎರಡನ್ನೂ ಮಸೂದೆಯು ರಕ್ಷಣೆ ಮಾಡುತ್ತದೆ. ಮುಖ್ಯವಾಗಿ ರೈತರಿಗೆ ಜಮೀನ್ದಾರ ಜಮೀನನ್ನು ಜಾಗ್ರತೆ ಬಿಡಿಸಿ ತೊಂದರೆ ಮಾಡದಂತೆ ಐದು ವರ್ಷಗಳಿಗೆ ಕಡಿಮೆ ಯಾವ ರೈತನಿಗೂ ಕೊಡಬಾರದೆಂದು ಹೇಳಿರುವುದು ಸರ್ವಸಮ್ಮತವಾಗಿದೆ. ಈ ದಿವಸ ರೈತನು ಒಂದು ಜಮೀನನ್ನು ತೆಗೆದುಕೊಂಡರೆ ಅವನು ಆ ಜಮೀನು ಅನುಕೂಲವಾಗಿದೆಯೆಂದು ಕಂಡರೆ ಅದಕ್ಕೆ ಗೊಬ್ಬರ ಗೋಡು ವಗೈರೆ ಹಾಕುವುದರಿಂದ ಹೆಚ್ಚು ಫಲ ಬರುತ್ತದೆ. , ಆದರೆ ಅದರ ಫಲ ಮೊದಲಲ್ಲಿ ಕಾಣದೆ ನಾಲ್ಕೈದು ವರ್ಷಗಳಾದ ಮೇಲೆ ಬರುವುದು. ಕಷ್ಟಪಟ್ಟು ಕೆಲವುಕಾಲ ಕೆಲಸ ಮಾಡಿದ ಮೇಲೆ ಆ ರೈತನನ್ನು ಬಿಡಿಸಿದರೆ ಅವನಿಗೆ ಅನ್ಯಾಯವಾಗುತ್ತದೆ. ಆದ್ದರಿಂದ ರೈತ ವ್ಯವಸಾಯ ಮಾಡುವ ಜಮೀನು ಅವನ ಸ್ವಾಧೀನದಲ್ಲಿ ಕೆಲಸ ಕಾಲವಾದರೂ ಇದ್ದರೆ ಅವರಿಗೆ ಆಸೆಯಿರುತ್ತದೆ. ರೈತ ಸಮಾಧಾನದಿಂದ ಚೆನ್ನಾಗಿ ವ್ಯವಸಾಯ ಮಾಡುವುದರಿಂದ ಅವನಿಗೂ ಉಪಯೋಗ, ಜಮೀನ್ದಾರನಿಗೂ ಉಪಯೋಗ, ದೇಶಕ್ಕೂ ಒಳ್ಳೆಯದು, ಈ ದಿವಸ ಅಥವಾ ನಾಳೆ ಜಮೀನು ಬಿಡಿಸುತ್ತಾರೆ. ಎಂಬಭಯ ಇರುವ ರೈತ ಕಷ್ಟಪಟ್ಟು ಕೆಲಸ ಮಾಡುವುದಿಲ್ಲ. ತಾನು ಕಷ್ಟಪಟ್ಟರೆ ತನಗೆ ಅದರ ಫಲ ಬಂದರೂ ಬರಬಹುದು, ಇಲ್ಲದಿದ್ದರೂ ಇರಬಹುದು. ಎಂದು ಮುತವರ್ಜಿವಹಿಸದೆ ಸುಮ್ಮನೆ ಇರುತ್ತಾನೆ. ಜಮೀನ್ದಾರರನ ಹಿತ ದೃಷ್ಟಿಯಿಂದಲೂ ರೈತನ ಹಿತದೃಷ್ಟಿಯಿಂದಲೂ ಕೆಲವು ಕಾಲ ರೈತನ ಸ್ವಾಧೀನದಲ್ಲಿರುವುದು ಒಳ್ಳೆಯದು ಮತ್ತು ಮನಸ್ತಾಪ ಬಂದಾಗ ರಕ್ಷಣೆಯಿರಬೇಕು ಎಂದು ಅವಕಾಶಮಾಡಿದೆ.

ಇನ್ನು ಮುಖ್ಯವಾದ ಮತ್ತೊಂದು ಅಂಶವೇನೆಂದರೆ ಈ ಮಸೂದಾ ಕಾನೂನಿನ ಪ್ರಕಾರ ರೈತನು ಕೊಡತಕ್ಕ ಗುತ್ತಿಗೆ ಜಮೀನ್ದಾರರ ಇಷ್ಟದ ಪ್ರಕಾರ ಇರಬೇಕು ಮಳೆಬೆಳೆ ಹೇಗೆ ಆಗಲಿ ಅದನ್ನು ಅನುಸರಿಸಿರಬಾರದು ಎಂಬುದಾಗಿ ಲೆಕ್ಕಚಾರ ಮಾಡುತ್ತಾರೆ. ಹಾಗಿರದೆ ಒಂದು ನಿರ್ದಿಷ್ಟವಾದ ಗುತ್ತಿಗೆಯನ್ನು ಏರ್ಪಡಿಸಬೇಕು. ರೈತ ತನ್ನ ಹಿತರಕ್ಷಣೆಯನ್ನು ಮಾಡಿಕೊಳ್ಳುವ ಪರಿಸ್ಥಿತಿಯಲ್ಲಿ ಅನೇಕ ವೇಳೆ ಇರುವುದಿಲ್ಲ. ರೈತ ನಿಸ್ಸಹಾಯಕನಾಗಿರುವುದರಿಂದ ಅಬಲನಾಗಿರುವುದರಿಂದ ಅವನು ತನ್ನ terms enforce ಮಾಡುವ ಪರಿಸ್ಥಿತಿಯಲ್ಲಿಲ್ಲದೇ ಇರುವುದರಿಂದ ಸರ್ಕಾರ ಅವನ ಸಹಾಯಕ್ಕೆ ಬಂದು ಸಾಧ್ಯವಾದಮಟ್ಟಿಗೆ ಎಲ್ಲಾ ಕ್ಷೇತ್ರಗಳಲ್ಲೂ ಒಂದೇ ರೀತಿಯ ಗುತ್ತಿಗೆ ಇರಬೇಕೆಂಬ ಏರ್ಪಾಡು ಮಾಡುವಂತಿರಬೇಕು. ಎಲ್ಲೆಲ್ಲಿ ಯಾವಯಾವ ಪ್ಪತಿ ಇದೆಯೋ ಹೆಚ್ಚು ಕಮ್ಮಿ ಆ ಪದ್ಧತಿಯನ್ನು ಅನುಸರಿಸಿಕೊಂಡು ರೈತ ಕೊಡತಕ್ಕ ಗುತ್ತಿಗೆ ಇಷ್ಟೇ ಎಂಬುದು ನಿರ್ದಿಷ್ಟವಾಗಬೇಕೆಂಬುದು ಮತ್ತು ರೈತ ಕೊಡತಕ್ಕ ಗುತ್ತಿಗೆಗೆ ರಶೀದಿ ಕೊಡಬೇಕು ಎಂಬುದು ಈ ಕಾನೂನಿನಲ್ಲಿ ಅಡಕವಾಗಿದೆ. ಈ ಮಸೂದಾ ಕಾನೂನಿನ ಪ್ರಕಾರ ಮತ್ತೊಂದು ರಕ್ಷಣೆ ಎಂದರೆ ಐದು ವರ್ಷ ಜಮೀನ್ ಮಾಡತಕ್ಕ ರೈತ ಒಂದು ವೇಳೆ ಅವನು ಜಮೀನ್ದಾರನು ಒಪ್ಪಿಗೆಯಿಂದ ಮುಂದಿನ ವರ್ಷವೂ ಅವನೇ ಗುತ್ತಿಗೆ ಪಡೆದರಾಗಲೀ ಅಥವಾ ಜಮೀನ್ದಾರ ಅವನೇ ಇದ್ದು ಕೊಂಡು ಹೋಗಲಿ ಅಡ್ಡಿಯಿಲ್ಲ ಎಂಬುದಾಗಿ ಅಪೇಕ್ಷೆ ಪಡುವುದಾಗಲಿ ಅಂಥಾ ಸಂದರ್ಭದಲ್ಲಿ ಆ ರೈತನ ಹಕ್ಕು ಇನ್ನು ಐದುವರ್ಷದ ಕಾಲ ಇರತಕ್ಕದ್ದು ಎಂದು ಅನುಕೂಲಮಾಡಿಕೊಟ್ಟಿದೆ. ಕೆಲವು ಉದಾಹರಣೆಗಳನ್ನು ಮಾನ್ಯ ಸದಸ್ಯರು ಕೊಟ್ಟರು. ಐದು ವರ್ಷ ಮುಕ್ತಾಯವಾದ ಮೇಲೂ ಸಹ ಜಮೀನ್ದಾರ ತಾನೇ ಬಂದು ಅವನನ್ನುಬಿಡಿಸುವ ಸ್ಥಿತಿಯಲ್ಲಿರುವುದಿಲ್ಲ. ಕಾಲಾವಕಾಶವಿರುವುದಿಲ್ಲ. ಅಂಥಾ ಸಮಯದಲ್ಲಿ ತೊಂದರೆಯಾಗುತ್ತದೆ ಎಂದು ಹೇಳಿದರು. ಆ ತೊಂದರೆ ರೈತನಿಗೂ ಇರುತ್ತದೆ. ಜಮೀನ್ದಾರನಿಗೂ ಇರುತ್ತದೆ ಒಂದು ಕಾನೂನು ಪ್ರಕಾರ ಒಂದು ಹಕ್ಕು ಸಿದ್ಧಮಾಡಿಕೊಟ್ಟಿರುವಾಗ ಅದರ ಫಲ ರೈತ ಪಡೆಯದಿದ್ದರೆ ಅದು ಅವನ ತಪ್ಪು, ಜಮೀನ್ದಾರ ಪಡೆಯದಿದ್ದರೆ ಅದು ಅವನ ತಪ್ಪು. ಅಂಥಾ ಸಂದರ್ಭದಲ್ಲಿ ಯಾರಿಗೂ ಅನಾನುಕೂಲವಾಗುವುದಿಲ್ಲ. ಯಾವ ಸರ್ಕಾರವು ಕರಾರುವಾಕ್ಕಾಗಿ ಕಾನೂನು ಮಾಡುವುದಕ್ಕಾಗುವುದಿಲ್ಲ.

ಇನ್ನೊಂದು ರೈತನಿಗೆ ಕೊಟ್ಟಿರತಕ್ಕ ಹಕ್ಕು ಎಂದರೆ ಜಮೀನ್ದಾರ ನಿರ್ದಿಷ್ಟ ಕಾಲಾವಧಿಯೊಳಗೆ ರೈತನನ್ನು ಬಿಡಿಸಿದರೆ ಜಮೀನ್ದಾರನ ಮೇಲೆ ಆ ರೈತನಿಗೆ ಹಕ್ಕಿದೆ. ಗೇಣಿ ಮುಗಿದ ಕೂಡಲೆ ರೈತ ಬಿಡದಿದ್ದಲ್ಲಿ ಜಮೀನ್ದಾರ ಅಪೀಲು ಮಾಡುತ್ತಾನೆ. ವಿಚಾರಣೆ ಆಗುತ್ತದೆ. ರೈತನನ್ನು ಬಿಡಿಸಿ ಆತನ ಹಕ್ಕು ಸಿದ್ಧಮಾಡಿಕೊಡುತ್ತಾರೆ. ರೈತನಿಂದ ಜಮೀನ್ದಾರರಿಗೆ ಅನ್ಯಾಯವಾಗುತ್ತದೆ ಹಾಹಾಕಾರವಾಗುತ್ತದೆ. ಅಲ್ಲೋಲಕಲ್ಲೋಲವಾಗುತ್ತದೆ ಎಂದು

ಹೇಳಿದರು. ರೈತ ಜಮೀನನ್ನು ಸರಿಯಾಗಿ ನೋಡಿಕೊಳ್ಳದೆ ಜಮೀನು ಕೆಡಿಸಬಹುದು. ಎಂದು ಇಟ್ಟುಕೊಳ್ಳೋಣ. ಅದಕ್ಕೆ ಅವಕಾಶ ಮಸೂದಾ ಕಾನೂನಿನಲ್ಲಿ ಮಾಡಿಕೊಟ್ಟಿದೆ. ಕೆಡಿಸಿದರೆ ತಪ್ಪಿತಸ್ಥನಾಗುತ್ತಾನೆ. ತನಗಿರತಕ್ಕ ಹಕ್ಕನ್ನು ಬಿಟ್ಟು ಕೊಡುವ ಪರಿಸ್ಥಿತಿ ಬರುತ್ತದೆ. ಅಷ್ಟೇ ಅಲ್ಲ. ಈ ಮಸೂದಾ ಕಾನೂನಿನ ಪ್ರಕಾರ ಜಮೀನ್ದಾರ ತನಗೆ ಆಗಿರತಕ್ಕ ನಷ್ಟವನ್ನು ಆ ರೈತನಿಂದ ವಸೂಲುಮಾಡಲು ಅವಕಾಶವಿದೆ. ಒಬ್ಬ ರೈತ ತೆಗೆದುಕೊಂಡಿರತಕ್ಕ ಜಮೀನನ್ನು ಇನ್ನೊಬ್ಬ ರೈತನಿಗೆ ಕೋರಿಗೆ ಅಥವಾ ಗುತ್ತಿಗೆಗೆ ಕೊಡುವಹಾಗಿಲ್ಲ. ಅಥವಾ ಅವನು ಅದನ್ನು ಉಳದೇ ಬಿಡುವ ಹಾಗಿಲ್ಲ. ಉಳದೇ ಬಿಟ್ಟರಾಗಲೀ ಜೊತೆಯವನಿಗೆ ಗುತ್ತಿಗೆಗೆ ಕೊಟ್ಟರಾಗಲೀ ಆ ರೈತ ತನ್ನ ಹಕ್ಕನ್ನು ಬಿಟ್ಟುಕೊಡುತ್ತಾನೆ ಎಂಬುದಾಗಿ ವಿಧಾಯಕವಾಗಿದೆ. ಆದ್ದರಿಂದ ಜಮೀನ್ದಾರನಿಗೆ ಅನ್ಯಾಯವಾಗುವುದಿಲ್ಲ. ರೈತ ತನ್ನ ಖರ್ಚಿನಿಂದ ಜಮೀನಿನಲ್ಲಿ ಮನೆಕಟ್ಟಿಕೊಂಡಿದ್ದರೆ ತನ್ನ ಹಕ್ಕು ಮುಕ್ತಾಯವಾದ ಕೂಡಲೇ ಆ ಮನೆಯನ್ನು ಕೂಡ ಕೊಟ್ಟುಬಿಡಬೇಕೆಂದು ವಿಧಾಯಕವಾಗಿದೆ. ಈ ರೀತಿ ಜಮೀನ್ದಾರನಿಗೆ ಯಾವ ಅನ್ಯಾಯವೂ ಇಲ್ಲದೆ ರೈತನ ಪರಿಸ್ಥಿತಿಯನ್ನು ಉತ್ತಮಗೊಳಿಸಲು ಒಂದು ಕಾನೂನಿನ ಅಧಿಕಾರದ ಒಳಗೆ ತಂದ ಮಾತ್ರಕ್ಕೆ ಈ ಕಾನೂನು ಜಮೀನ್ದಾರರಿಗೆ ನಿರುತ್ಸಾಹವನ್ನುಂಟುಮಾಡುವಂಥಾದ್ದು, ಜಮೀನ್ದಾರನ್ನು ಇಕ್ಕಟ್ಟಿಗೆ ಸಿಕ್ಕಿಸುತ್ತದೆ ಎಂದು ಹೇಳಿದರೆ ಅದು ಸರ್ವಸಮ್ಮತವಾದುದಲ್ಲ, ನ್ಯಾಯಸಮ್ಮತವಾದುದಲ್ಲ. ಯಾವ ದೃಷ್ಟಿಯಿಂದ ನೋಡಿದರೂ ಜಮೀನ್ದಾರರಿಗೆ ಯಾವ ಅನ್ಯಾಯವೂ ಆಗಿಲ್ಲ. ಜಮೀನ್ದಾರರಿಗೂ, ರೈತರಿಗೂ ಯಾವ ಯಾವ ರಕ್ಷಣೆಗಳಿವೆ ಎಂಬುದು ಕಾನೂನಿನಲ್ಲಿ ವಿಧಾಯಕವಾಗಿದೆ. ತಕ್ಕ ರಕ್ಷಣೆ ಸಿಕ್ಕುತ್ತದೆ. ಈಕಾನೂನನ್ನು ತಂದ ಮಾತ್ರಕ್ಕೆ ಅಲ್ಲೋಲಕಲ್ಲೋಲವಾಗುತ್ತದೆಯೆಂದು ಭಯಪಡಬೇಕಾಗಿಲ್ಲ. ಶ್ರೀ ರಂಗರಾಮಯ್ಯನವರು ಸ್ವಂತ ಆಸ್ತಿ ಇಟ್ಟುಕೊಂಡಿರುವವರಿಗೆ ಯಾವ ಭರವಸೆ ಇದೆ ಎಂದು ಕೇಳಿದರು. ಈಗಲಾದರೂ ಇಷ್ಟುಮಟ್ಟಿಗೆ ಭರವಸೆ ಸಿಕ್ಕಿದೆ. ನಾಳೆ ಯಾವ ಸರ್ಕಾರ ಬರುತ್ತದೆಯೋ ಹೇಳುವುದಕ್ಕಾಗುವುದಿಲ್ಲ. ಸಮತಾವಾದ ಪಕ್ಷದ ಮುಂದಾಳುಗಳು ಭಾರತದಲ್ಲೆಲ್ಲಾ ಒಬ್ಬ ಜಮೀನ್ದಾರ ಮೂವತ್ತು ಅಥವಾ ಅದಕ್ಕಿಂತ ಹೆಚ್ಚು ಎಕರೆ ಜಮೀನು ಇಟ್ಟುಕೊಳ್ಳುವ ಹಾಗಿಲ್ಲ ಹಾಗಿದ್ದರೆ ಅದೆಲ್ಲಾ ಸರ್ಕಾರಕ್ಕೆ ಸೇರಿದ್ದು ಎಂದು ಹೇಳುತ್ತಿದ್ದಾರೆ. ಮುಂದೆ ಬರುವ ಸರ್ಕಾರದಲ್ಲಿ ನಗೆ ಹಕ್ಕು ಇಲ್ಲವೇ ಎಂದು ಕೇಳುವುದಕ್ಕೂ ಆಗುವುದಿಲ್ಲ. ಅದಕ್ಕಿಂತ ಮುಂದೆ ಹೋಗತಕ್ಕ ಕಮ್ಯೂನಿಸ್ಟ್‌ಸರ್ಕಾರ ಬಂದರೆ ಇರುವುದನ್ನು ಕಿತ್ತುಕೊಂಡು ಜಮೀನು ಹಂಚಿಕೆ ಮಾಡತಕ್ಕ ವಿಚಾರ ಎಲ್ಲರಿಗೂ ತಿಳಿದ ವಿಷಯ.

Sri L. SIDDAPPA-It is not the Socialists alone. Even those who follow Gandhian principles have advocated it. Dr.J.C.Kumarappa has advocated it.

ಶ್ರೀ ಎಂ.ಗೋವಿಂದರೆಡ್ಡಿಯವರು-ಹೌದು. ಅದು ಸರಿ. ಆದರೆ ಆ ರೀತಿ ಜಾರಿಯಲ್ಲಿಲ್ಲ ಹೇಳುತ್ತಾ ಇದ್ದೇನೆ. ಆದ್ದರಿಂದ ಈಗ ಒಂದು ಪರಿಸ್ಥಿತಿ ಉಲ್ಬಣವಾಗಿ ರೈತರಿಗೂ ನಮಗೂ ಸಮಾಧಾನಕರವಾದ ಪರಿಸ್ಥಿತಿಯಿಲ್ಲ ಎಂಬುದಾಗಿ ಅಸಮಾಧಾನಗೊಂಡು ಉಗ್ರವಾದಿಗಳಿಗೆ ಶರಣುಹೋಗುವುದಕ್ಕೆ ಮುಂಚೆ ಕಾಲ ಧರ್ಮ ಅರಿತು ಅದಕ್ಕನುಸರಿಸಿಕೊಂಡು ತಮಗೂ ಅಷ್ಟು ಬರಲಿ, ಕಷ್ಟಪಡತಕ್ಕ ರೈತನಿಗೂ ಸ್ವಲ್ಪ ಅನುಕೂಲವಾಗಲೀ ಎಂಬ ದೃಷ್ಟಿಯಿಂದ ಈ ಮಸೂದಾಕಾನೂನಿಗೆ ಒಪ್ಪಿಗೆ ಕೊಡುವುದು ನ್ಯಾಯವಾಗಿದೆ ಎಂದು ನನಗೆ ಅನ್ನಿಸುತ್ತದೆ.

ಶ್ರೀ ಎಂ.ವಿ.ಕೃಷ್ಣಪ್ಪನವರು(ಕೋಲಾರ ಜಿಲ್ಲೆ)-ಸ್ವಾಮಿ ಈ ಟೆನೆನ್ಸಿಬಿಲ್ ವಿಚಾರದಲ್ಲಿ ಮಾತನಾಡುತ್ತಾನಮ್ಮ ಸ್ನೇಹಿತರು ಇದರ ಪ್ರತಿಯೊಂದು ಅಂಶವನ್ನೂ ಸಭೆಯ ಗಮನಕ್ಕೆ ತಂದು ಮಾತನಾಡಿದ್ದಾರೆ. ಆದ್ದರಿಂದ ನಾನು ಹೆಚ್ಚಿಗೆ ವಿವರಗಳಿಗೆ ಹೋಗದೆ ಶ್ರೀಮಾನ್‌ರಂಗರಾಮಯ್ಯನವರು ಮತ್ತು ಶ್ರೀಮಾನ್‌ಚನ್ನಬಸಪ್ಪನವರು ವ್ಯಕ್ತಪಡಿಸಿದ ಕೆಲವು ಅಭಿಪ್ರಾಯಗಳ ವಿಚಾರದಲ್ಲಿ ಅದನ್ನು ಖಂಡಿಸಬೇಕೆಂದು ಮಾತನಾಡುತ್ತಿದ್ದೇನೆ.



# ಭೂ ಸುಧಾರಣಾ ಸಮಿತಿಯ ಕುರಿತು ಚರ್ಚೆ

**19 ನೇ, ಏಪ್ರಿಲ್, 1953**

Mr. DEVARAJURS-I may state for the information of the Hon`ble member that it is called the land Reforms committee.ಸ್ವಾಮಿ. ಭೂಸುಧಾರಣೆಯಾಗಬೇಕೆಂದು ಹೇಳುವವರಲ್ಲಿ ನಾನೂ ಒಬ್ಬ. ಆದರೆ ಅವರು ಹೇಳುವ ಹಾಗೆ, ಜಮೀನಿರುವವರಿಂದ ಅದನ್ನು ಕಿತ್ತು ಬೇರೆಯವರಿಗೆ ಕೊಡುವುದು, ಬಹಳ ದೀರ್ಘವಾಗಿ ಯೋಚನೆ ಮಾಡಬೇಕಾದ ವಿಚಾರ. ಹೊಸದಾಗಿ ಜಮೀನು ಕೊಡುವುದು ಎನ್ನುವ ವಿಚಾರಗಳಲ್ಲಿ ಮಾತನಾಡಿದ್ದಾರೆ. ಒಂದು ಅನುಭವವನ್ನು ಹೇಳುತ್ತೇನೆ. ಹುಣಸೂರು ತಾಲ್ಲೂಕಿನಲ್ಲಿ ಸಹಕಾರ ಸಂಘ ಒಂದನ್ನು ಏರ್ಪಡಿಸಿ ಮೂರು ಸಾವಿರ ಎಕರೆ ಜಮೀನನ್ನು ಕೊಟ್ಟಿದ್ದಾರೆ. ನಾವು ಸುಮಾರು ಮೂರು ವರ್ಷದಿಂದ ಜಮೀನು ಕೊಡುತ್ತೇವೆ, ಆದರೆ, ಸ್ವಾಮಿ, ಆ ಪ್ರದೇಶದಲ್ಲಿ ನಾಲ್ಕೈದು ಮೈಲಿ ದೂರದಲ್ಲಿರು ಜಮೀನಿಲ್ಲದಿರುವ ಜನರಿದ್ದರೂ ಅವರು ಅಲ್ಲಿಗೆ ಬರುತ್ತಿಲ್ಲ. ಕೊಡಗಿನ ಕಡೆಯಿಂದ ಕೊಯಮತ್ತೂರು ಕಡೆಯಿಂದ ಬಂದು ವ್ಯವಸಾಯಗಾರರು ಅಲ್ಲಿ ನೆಲೆಸಿದ್ದಾರೆಯೇ ಹೊರತು ಸ್ಥಳದವರೊಬ್ಬರೂ ಬಂದಿಲ್ಲ. ಅಲ್ಲಿ ಏನೇನು ಅನುಕೂಲತೆಗಳನ್ನು ಕೊಡುತ್ತೇವೆಂದರೆ, ವ್ಯವಸಾಯಗಾರ ಬಂದರೆ ಅವನಿಗೆ ಎರಡೆಕರೆ ತರೀ ಜಮೀನು, ಐದು ಎಕರೆ ಖುಷ್ಕಿ ಜಮೀನು ಕೊಡಬೇಕೆಂದು ಮಾಡಿದ್ದೇವೆ. ಇದರ ಜೊತೆಗೆ ಸಂಘದಿಂದಲೇ ಎತ್ತುಗಳು ಕರುಗಳನ್ನು ತೆಗೆದುಕೊಳ್ಳುವುದಕ್ಕೆ, ವ್ಯವಸಾಯದ ಸಲಕರಣೆಗಳನ್ನೊದಗಿಸಿಕೊಳ್ಳುವುದಕ್ಕೆಂದು 200ರೂಪಾಯಿಗಳಿಂದ 500 ರೂಪಾಯಿಗಳವರೆಗೆ ಸಾಲ ಕೊಡಬೇಕೆಂದು ಮಾಡಿದ್ದೇವೆ. ಹೀಗಿದ್ದರೂ ಸ್ಥಳದ ಜನರು ಅಲ್ಲಿ ಬರದೆ , ಹುಣಸೂರಿನಲ್ಲಿದ್ದು ಕೊಡಗಿಗೆ ಹೋಗುವ ಲಾರಿಗಳ ಮೇಲೆ ಹೋಗಿ ಕಾಡಿನಲ್ಲಿ ಎರಡು ಗಂಟೆ ಕಾಲ ಮರ ಕತ್ತರಿಸಿ ನಾಲ್ಕೆಮ ರೂಪಾಯಿ ಸಂಪಾದನೆ ಮಾಡಿ ಹೊಟೇಲ್ಲುಗಳಲ್ಲಿ ಹೊಟ್ಟೆ ಹೊರೆದುಕೊಂಡು ಕಾಲ ತಳ್ಳುತ್ತಿದ್ದಾರೆಯೇ ವಿನಾ ಜಮೀನಿನಲ್ಲಿ ಕೆಲಸ ಮಾಡಲು ಅವರಿಗೆ ಆಸಕ್ತಿಯಿಲ್ಲ. ಯಾರು ಯಾರು ಜಮೀನಿಲ್ಲವೆಂದು ಹೇಳುತ್ತಾರೋ ಅವರಿಗೆ ಅವರ ಸ್ಥಳದಲ್ಲಿಯೇ ಗೋಮಾಳವಾದರೂ ಕೊಡಿ, ಗುಂಡು ತೋಪಾದರೂ ಕೊಡಿ, ಏನಾದರೂ ಮಾಡಿ, ಭೂಮಿ ಇಲ್ಲದಿದ್ದರೆ ಸರ್ಕಾರದವರು ಉತ್ಪತ್ತಿ ಮಾಡಿಕೊಡಿ ಎಂದು ಕೇಳಿದರೆ ಅದು ಸಾಧ್ಯವೆ?ಮಲೆನಾಡಿನಲ್ಲಿ ತಮಗೆ ಗೊತ್ತಿರುವ ಹಾಗೆ ಲಕ್ಷಾಂತರ ಎಕರೆ ಜಮೀನು ಕೂಡಾ ಬೇಕಾದಷ್ಟಿದೆ. ಮಲೆನಾಡಿನಲ್ಲಿ ಜಮೀನು ವ್ಯವಸಾಯ ಮಾಡುವುದಕ್ಕೆ ದೊಡ್ಡ ಕೊರತೆಯೆಂದರೆ ಜನರು ಇಲ್ಲದೇ ಇರುವುದು. ಅಂಥ ಸ್ಥಳಕ್ಕೆ ಜನರು ಹೋದರೆ ಬೇಕಾದಷ್ಟು ಜಮೀನು ಕೊಡಬಹುದು. ಮೈಸೂರು ದೇಶದಲ್ಲಿ ಜಮೀನಿಗೆ ಅಭಾವವಿಲ್ಲವೆಂಬುದು

ಖಚಿತವಾದ ವಿಚಾರ. ನಾವು ಇನ್ನೊಂದು ವಿಷಯ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಮೈಸೂರುದೇಶವಲ್ಲಿರುವುದು ರೈತವಾರಿ ಪದ್ಧತಿ. ಇಲ್ಲಿ. ಒಟ್ಟು ೧೩ ಲಕ್ಷ ಖಾತೇದಾರರ ಪೈಕಿ ದೊಡ್ಡ ದೊಡ್ಡ ಜಮೀನ್ದಾರರು, ನೂರು ಎಕರೆಗಳ ಮೇಲೆ ಜಮೀನಿರುವವರು, ಹತ್ತು ಹದಿನೈದು ಸಾವಿರ ಜನರಿದ್ದರೆ ಹೆಚ್ಚು. ಆದುದರಿಂದ ಅಂಥ ಕ್ರಾಂತಿಕಾರಿ ಸುಧಾರಣೆಯ ಅಗತ್ಯ ಇಲ್ಲಿ ಯಾವುದೂ ಕಾಣಲಿಲ್ಲ ರೈತವಾರಿ ಪದ್ಧತಿಯಲ್ಲಿ ನಮ್ಮ ದೇಶದಲ್ಲಿ....

ಶ್ರೀ ಎಂ. ಮಾದಯ್ಯ-ನೂರು ಎಕರೆಗಿಂತ ಹೆಚ್ಚಿರುವವರು3,80,000ಜನರಿದ್ದಾರೆ.

Sri.D.Devarajurs- It is incorrect, it is Wrong , I challenge . it is only 3,000 and odd it, is in the statistics also.

Mr. Speaker :- You can go on.

ಶ್ರೀ ಡಿ.ದೇವರಾಜ ಅರಸ್:-Thank you Sir,ಹೀಗಿರುವಾಗ ಹೆಚ್ಚಿಗೆ ಬದಲಾವಣೆ ಬೇಕಾಗಿಲ್ಲ. ಜನರು ಜಮೀನಿರುವ ಕಡೆ ಹೋಗುವುದಕ್ಕೆ ಮನಸ್ಸು ಮಾಡಬೇಕು. ಸರ್ಕಾರದವರು ಸಹಾಯ ಸಲಕರಣೆಗಳನ್ನೊದಗಿಸಿಕೊಡಬೇಕು. ಜನರಿಗೆ ಅನುಕೂಲತೆ ದೊರಕಬೇಕು,ಜಮೀನು ದೊರಕಬೇಕೆಂಬ ಭಾವನೆಯಿರುವವರಲ್ಲಿ ನಾನು ಒಬ್ಬ. ಹಾಗಿರುವಾಗ ಇಲ್ಲಿ ಯಾವ ಹೆಚ್ಚು ಬದಲಾವಣೆಯೂ ಅನಗತ್ಯ. ಜನರು ಜಮೀನಿರುವ ಕಡೆಗೆ ಹೋಗುವುದಕ್ಕೆ ಮನಸ್ಸು ಮಾಡಬೇಕು. ಇದಕ್ಕೆ ಸರಕಾರದವರೂ ತಕ್ಕ ಸಹಾಯ ಸಲಕರಣೆಗಳನ್ನು ಒದಗಿಸುವುದಕ್ಕೆ ಮನಸ್ಸು ಮಾಡಿದರೆ ಜನರಿಗೆ ಬೇಕಾದ ಅನುಕೂಲ ಸಿಕ್ಕುತ್ತದೆ. ಜಮೀನು ಕೂಡಾ ಇದೆ. ಈ ಕಾರಣಗಳಿಂದ ಸಮಿತಿ ರಚನೆ ಅಗತ್ಯವೇನೂ ಇಲ್ಲವೆಂದು ಹೇಳುವವರಲ್ಲಿ ನಾನೂ ಒಬ್ಬ.



# ಟೆನೆನ್ಸಿ ಆಕ್ಟನ ಮೇಲೆ ಚರ್ಚೆ - ಶ್ರೀ ಪಿ.ಸೀತಾರಾಮಯ್ಯನವರು ಅತೀ ಮಬ್ಬಾದ ರೀತಿಯಲ್ಲಿ ಟೆನೆನ್ಸಿ ಆಕ್ಟನ್ನು ಮಂಡಿಸಿರುವುದರ ಬಗ್ಗೆ

## ಶ್ರೀ ಕಡಿದಾಳ ಮಂಜಪ್ಪನವರ ಸ್ಪಷ್ಟೀಕರಣ.

**27 ನೇ, ಮಾರ್ಚ್ ,1953**

**ಶ್ರೀ ಕಡಿದಾಳ್ ಮಂಜಪ್ಪ (ಕಂದಾಯ ಮಂತ್ರಿ)**

ಮಾನ್ಯರೇ, ನನ್ನ ಮಿತ್ರರಾದ ಶ್ರೀ ಪಿ.ಸೀತಾರಾಮಯ್ಯನವರು, ಶ್ರೀರಂಗಪಟ್ಟಣದ ತಾಲ್ಲೂಕಿನಲ್ಲಿ ಜಾರಿಯಲ್ಲಿರುವ ಟೆನೆನ್ಸಿ ಕಾಯ್ದೆಯ ಬಗ್ಗೆ ಮಬ್ಬಾದ ಚಿತ್ರವನ್ನು ಮಂಡಿಸಿದ್ದಾರೆ.

ಮಾನ್ಯರೇ, ಆಕಾಯ್ದೆಯನ್ನು ಕೆಳಮನೆಯಲ್ಲಿ ಚರ್ಚಿಸಿದ್ದಾಗ ತಾವು ಕಾನೂನು ಸದಸ್ಯರಿದ್ದೀರಿ. ನನ್ನ ಜೊತೆ, ತಾವು ಕೂಡ ಸೆಲೆಕ್ಟ ಸಮಿತಿಯ ಸದಸ್ಯರಿದ್ದೀರಿ. ರಾಯರೇ ಈ ಕಾಯ್ದೆಯು ಭಾರತದಲ್ಲಿ ಜಾರಿಯಲ್ಲಿದ್ದ ಅತೀ ಸೌಮ್ಯದ ಟೆನಾನ್ಸಿ ಕಾಯ್ದೆಯೆಂದು ನಾನು ಹೇಳಲೇಬೇಕಾಗುತ್ತದೆ. ಆ ಕಾಯ್ದೆಯನ್ನು , ಬೊಂಬೈ ಟೆನೆನ್ಸಿ ಕಾಯ್ದೆಯ ಮಾದರಿಯ ಆಧಾರದ ಮೇಲೆ ರಚಿಸಲಾಗಿದೆ. ಆದರೆ, ಬೊಂಬೈ ಕಾಯ್ದೆಯಲ್ಲಿ ಗೇಣಿದಾರರಿಗೆ ಅನುಕೂಲವಾಗುವಂಥ ಅನೇಕ ಉಪಬಂಧಗಳು ಈ ಕಾಯ್ದೆಯಲ್ಲಿ ಕಂಡು ಬರುವುದಿಲ್ಲ. ಅದಕ್ಕಾಗಿಯೇ, ಸಮಿತಿಯ ಕೆಲವು ಶಿಫಾರಸ್ಸುಗಳಿಗೆ ನಾನು ವಿರೋಧಿಸಿದೆ. ಭಾರತದ ಸ್ವಾತಂತ್ರ್ಯದ ನಂತರ, ಭೂಸುಧಾರಣೆಗಳ, ಕಡೆ ಜನರ ಗಮನ ಸೆಳೆಯಿತು. ಕೆಲವು ವರ್ಷಗಳ ಹಿಂದೆ ಸ್ಥಾಪಿಸಿದ ಕಾಂಗ್ರೆಸ್ ಕೃಷಿ ಸಮಿತಿಯು ಕೆಲವು ಷರತ್ತುಗಳ ಪ್ರಕಾರ "ಉಳುವವನೇ ಭೂಮಿಯ ಒಡೆಯ"ನೆಂದು ಅಭಿಪ್ರಾಯ ವ್ಯಕ್ತಪಡಿಸಿತು. ಪುನಃ ಇತ್ತೀಚೆಗೆ ಯೋಜನಾ ಆಯೋಗವು, ಭೂಮಿಯ ಬಗ್ಗೆ ಇದ್ದ ಸಮಸ್ಯೆಯನ್ನು ಕೂಡಲೇ ಬಗೆಹರಿಸಬೇಕೆಂದು ಸೂಚಿಸಿತು. ಜಮೀನುದಾರರಿಗೆ ನನ್ನ ಕಳಕಳಿಯ ವಿನಂತಿಯೇನೆಂದರೆ, ಅವರು ಸಮಯಕ್ಕನುಸಾರವಾಗಿ ನಡೆಯಬೇಕು. ಇಲ್ಲದಿದ್ದರೆ, ಅವರ ಅಧೋಗತಿಯೇ ಸರಿ. ಅದಕ್ಕಾಗಿಯೇ ಶ್ರೀಮಾನ್ಯ ಸೀತಾರಾಮಯ್ಯನವರು"ಗೇಣಿದಾರರ ಮತ್ತು ಜಮೀನುದಾರರ ನಡುವೆ ಸಾಮರಸ್ಯ ಇಲ್ಲ"ವೆಂಬ ಹೇಳಿಕೆ ಸತ್ಯವಾದದ್ದು. ಪ್ರಾರಂಭಿಕ ಹಂತದಲ್ಲಿ ಇಂತ ಸನ್ನಿವೇಶಗಳು ಬಂದೊದಗುವುದು ಸಹಜ. ಆದರೆ ಕ್ರಮೇಣ, ಈಕಾಯ್ದೆಯ ಉಪಬಂಧಗಳ ಪ್ರಕಾರ, ಜಮೀನುದಾರರು ಮತ್ತು ಗೇಣಿದಾರರು, ಹೊಂದಿಕೊಂಡು ಹೋಗಬೇಕು.

ನನ್ನ ಮಿತ್ರರು. ಕೆಲವು ಜನರು ಈ ಕಾಯ್ದೆಯ ವಿರುದ್ಧ ಇದ್ದಾರೆ. ಎಂಬುದು ಸತ್ಯ. ಏಕೆಂದರೆ ಕಾಯ್ದೆಯ ವಿರುದ್ಧ, ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಕೆಲಸ ಮಾಡುವುದು ಸಹಜ ಮತ್ತು ಸ್ವಾಭಾವಿಕ. ಕಾಯ್ದೆಯಲ್ಲಿ ಮಾರ್ಪಾಡು ಮಾಡಬೇಕಾಗುತ್ತದೆ. ನನಗೂ ಕಾಯ್ದೆಯಲ್ಲಿನ ಕೆಲವು ಉಪಬಂಧಗಳು

ಅಷ್ಟು ಸ್ಪಷ್ಟರೀತಿಯಲ್ಲಿಲ್ಲ ಅನಿಸುವುದು, ಅದನ್ನು ತಿದ್ದುಪಡಿ ಮಾಡಬೇಕಾಗುತ್ತದೆ. ಆ ದಿಶೆಯಲ್ಲಿ ಸರಕಾರವು ಗಂಭೀರವಾಗಿ ಪರಿಶೀಲಿಸುತ್ತಿದೆ.

ಮಾನ್ಯ ಸದಸ್ಯರ ಗಮನಕ್ಕೆ ನಾನು ತರುವುದೇನೆಂದರೆ, ಭಾರತದಲ್ಲಿ ಅತೀ ಉತ್ತಮವಾದ ಕಾಯ್ದೆ ಎಂದು , ಹೆಸರು ಪಡೆದ, ಬಾಂಬೆ ಟೆನೆನ್ಸಿ ಕಾಯ್ದೆಯ 1:6ದಷ್ಟು ಉತ್ಪನ್ನವು ಬಾಡಿಗೆಗೆ ಅವಕಾಶ ಮಾಡಿಕೊಡುತ್ತದೆ. ಶ್ರೀರಂಗಪಟ್ಟಣ ತಾಲ್ಲೂಕಿನಲ್ಲಿ ಬಾಡಿಗೆಯ, ಉತ್ಪನ್ನದ ಅರ್ಧದಷ್ಟು ಇರುತ್ತದೆ. ಮಲೆನಾಡು ತಾಲ್ಲೂಕುಗಳಲ್ಲಿ ಬಾಡಿಗೆಯು1:3ರಷ್ಟು ಇರುತ್ತದೆ. ಕೆಲವು ರೈತರ ಪ್ರಕಾರ, ಕಾಯ್ದೆಯನ್ನು ಇಡೀ ರಾಜ್ಯಕ್ಕೆ ಅನ್ವಯವಾಗುವಂತಾಗಬೇಕು. ಮತ್ತು ಗೇಣಿದಾರರಿಗೆ ಕೆಲವು ರಕ್ಷಣೆಗಳು ಸಿಗುವಂತಾಗಬೇಕು. ಶ್ರೀ ಸೀತಾರಾಮಯ್ಯನವರು ಹೇಳಿದಂತೆ , ಭೂಮಿಯ ಕಿಮ್ಮತ್ತು ಇಳಿಮುಖವಾಗಿರುತ್ತದೆ. ರಾಯರೇ ಕಾಯ್ದೆಯು ಕೇವಲ ಶ್ರೀರಂಗಪಟ್ಟಣ ತಾಲ್ಲೂಕಿಗೆ ಅನ್ವಯಿಸುವುದಿಲ್ಲ. ಅದು ಉಳಿದ ತಾಲ್ಲೂಕುಗಳಿಗೂ ಅನ್ವಯಿಸುತ್ತದೆ, ಕಾಯ್ದೆಯ ವಿರುದ್ಧ ಆಕ್ಷೇಪಣೆ ಮಾಡಿಲ್ಲ. ಕಾಯ್ದೆಯುಜಮೀನುದಾರರ ಹಿತಾಸಕ್ತಿಗಳನ್ನು ಕಾಪಾಡಲು ಅವಕಾಶ ನೀಡುತ್ತದೆ. ಗೇಣಿದಾರನು, ಬಾಡಿಗೆ ಕೊಡದಿದ್ದಲ್ಲಿ ಮಾತ್ರ ಅವನ ಸ್ವಾಧೀನತೆಯನ್ನು ತಪ್ಪಿಸಲಾಗುತ್ತದೆ. ಒಂದು ವೇಳೆ ಅವನು ಸಮರ್ಪಕವಾಗಿ ಭೂಮಿಯನ್ನು ಸಾಗುವಳಿ ಮಾಡದಿದ್ದಲ್ಲಿ , ಅವನ ಭೂ ಸ್ವಾಧೀನತೆಯನ್ನು ಕಸಿದು ಕೊಳ್ಳಲಾಗುತ್ತದೆ.

ನನ್ನ ಮಿತ್ರರು ಹೇಳಿದಂತೆ ,ಗೇಣಿದಾರನು, ಭೂಮಿಯನ್ನು ೧೨ ವರ್ಷಗಳವರೆಗೆ ಸಾಗುವಳಿ ಮಾಡಿದರೆ, ಅವನು ಆಭೂಮಿಯ ಖಾಯಂ ಒಡೆಯನಾಗುವನು. ಅದು ಸತ್ಯ ಒಂದು ವೇಳೆ ನೀವು ಭೂಮಿಯನನು ಸಾಗುವಳಿ ಮಾಡಬೇಕಾದರೆ, ನೀವು ಅಮಿಲದಾರರಿಗೆ ಅರ್ಜಿಸಲ್ಲಿಸಿ, ಭೂಮಿಯ ಮೇಲೆ ನಿಮ್ಮ ಸೊತ್ತನ್ನು ತೆಗೆದುಕೊಳ್ಳಬಹುದು. (ಅರ್ಧಕ್ಕಿಂತ ಹೆಚ್ಚು ಇಲ್ಲದ)ಆ ಉಪಬಂಧವನ್ನು ತಿದ್ದುಪಡಿ ಮಾಡಬೇಕಾಗುತ್ತದೆ. ಶ್ರೀರಂಗಪಟ್ಟಣದ ಜಮೀನುದಾರರ ಪ್ರತಿನಿಧಿಗಳು ನನಗೆ ಅರ್ಜಿ ಸಲ್ಲಿಸಿದ್ದಾರೆ. ನಾನು ಅದನ್ನು ಪರಿಶೀಲಿಸುತ್ತಿದ್ದೇನೆ.ವಿಧಾನಪರಿಷತ್ತಿನ ಮುಂದಿನ ಅಧಿವೇಶನದಲ್ಲಿ ಟೆನೆನ್ಸಿ ಕಾಯ್ದೆಯನ್ನು ತಿದ್ದುಪಡಿ ಮಾಡುವ ಮಸೂದೆಯನ್ನು ಮಂಡಿಸಲಾಗುತ್ತದೆ. ಶ್ರೀ ಸೀತಾರಾಮಯ್ಯನವರು ಹೇಳಿದಂತೆ, ಕಾಯ್ದೆಯು ಜನರನ್ನು ಸೋಮಾರಿಯನ್ನಾಗಿ ಮಾಡುತ್ತದೆ. ಅದು ಅವರ ಅನುಭವದ ಮಾತು ಎಂದು ಅವರುಹೇಳುತ್ತಾರೆ.

ಆದರೆ, ನನ್ನ ಪ್ರಕಾರ, ಆ ರೀತಿಯ ಹೇಳಿಕೆ ಮಾಡುವವರು ಪಟ್ಟಭದ್ರ ಹಿತಾಸಕ್ತಿಗಳು ಮಾತ್ರ. ಕಾಯ್ದೆಯನ್ನು ಗೇಣಿದಾರನನ್ನು ಸಹಾಯ ಮಾಡಲು, ಕೆಲವು ಪ್ರದೇಶಗಳಿಗೆ ಅನ್ವಯಿಸಲಾಗಿದೆ. ಕೆಳಮನೆಯಲ್ಲಿ . ಈ ಹಿಂದಿನ ದಿನ ಈ ಕಾಯ್ದೆಯನ್ನು ಸಮಸ್ತ ರಾಜ್ಯಕ್ಕೆ ಅನ್ವಯಿಸದೇ ಇರುವುದರ ಸರಕಾರದ ಕ್ರಮವನ್ನು ಬಹುತೇಕ ಸದಸ್ಯರು ಟೀಕಿಸಿದ್ದಾರೆ. ರಾಯರೇ, ಅಲ್ಲಿ ನಾನು ಕಾಯ್ದೆಯನ್ನು ಸಂಪೂರ್ಣ ರಾಜ್ಯಕ್ಕೆ ಅನ್ವಯವಾಗುವಂತೆ ಸರಕಾರ ವ್ಯವಸ್ಥೆ ಮಾಡುತ್ತದೆಯೆಂದು ಪ್ರಮಾಣ ಮಾಡಿದ್ದೇನೆ. ಈಗ ಪ್ರಶ್ನೆ ಇರುವುದು ಇದನ್ನು ಈಗ ಮಾಡಬೇಕೋ ಅಥವಾ ತಿದ್ದುಪಡಿಯ ನಂತರ ಸರ್ಕಾರವು ಈ ಪ್ರಶ್ನೆಯನ್ನು ಗಂಭೀರವಾಗಿ ಪರಿಶೀಲಿಸುತ್ತಿದೆ.

ಮಾನ್ಯ ಸದಸ್ಯರು ತಿಳಿಸಿದಂತೆ, ಹಿಡುವಳಿಗೆ ಗರಿಷ್ಟ ಮಿತಿ ನಿಗದಿಗೊಳಿಸಬೇಕು. ನಮ್ಮ ರಾಜ್ಯ ಸರಕಾರ ಅಲ್ಲದೇನೇ, ಕೇಂದ್ರ ಸರಕಾರವೂ ಈ ಪ್ರಶ್ನೆಯನ್ನು ಪರಿಶೀಲಿಸುತ್ತದೆ. ಗರಿಷ್ಟ ಮಿತಿ ನಿಗಧಿಗೊಳಿಸಲು, ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರದ ನಡುವೆ ಪತ್ರ ವ್ಯವಹಾರ ನಡೆದಿದೆ. ಈ ಪ್ರಶ್ನೆ, ತಿಳಿದುಕೊಂಡಷ್ಟು ಸುಲಭವಲ್ಲ. ಅದು ಒಂದು ಬಹಳ ಜಟಿಲವಾದ ಪ್ರಶ್ನೆಯಾಗಿದೆ. ಎಲ್ಲ ಪ್ರದೇಶಗಳಲ್ಲಿ, ಒಂದೇ ತೆರನಾದ ಗರಿಷ್ಟ ಮಿತಿ ನಿಗದಿಪಡಿಸಲು ಸಾಧ್ಯವಿಲ್ಲ. ಆ ಮಿತಿಯು ಪ್ರದೇಶ, ಭೂಮಿಯ ಸ್ವರೂಪ ಮತ್ತು ಇತರ ಸನ್ನಿವೇಶ ಅಥವಾ ಮೇಲೆ ನಿಗಧಿ ಪಡಿಸುವ ಮಿತಿಯು ಕೃಷಿಯ ಭೂಮಿಗಿಂತ ಭಿನ್ನವಾಗಿರುತ್ತದೆ. ಈಗ ಸಧ್ಯ, ನಾವು ಕೃಷಿಯ ಭೂಮಿಗಳ ಮೇಲೆ ಮಿತಿ ನಿಗಧಿ ಪಡಿಸುವುದು ಸಮರ್ಪಕ ಆ ದಿಶೆಯಲ್ಲಿ, ಕೂಡಲೇ ಒಂದು ನಿರ್ಧಾರ ತೆದೆಗುಕೊಳ್ಳಲಾಗುವುದು. ನಮ್ಮ ಸ್ನೇಹಿತರು, ಸೂಚಿಸಿದಂತೆ, ಸ್ವತ್ತಿನ ಹಂಚುವಿಕೆಯು ಕೇವಲ ಕೃಷಿ ಭೂಮಿಗಳಿಗೆ ಸೀಮಿತವಾಗದೇ, ಅದು ಮನೆ ಮತ್ತು ಇತರ ಸ್ವತ್ತುಗಳಿಗೆ ವಿಸ್ತರಿಸಬೇಕು. ನಾನು ಅವರ ಅಭಿಪ್ರಾಯಕ್ಕೆ ಒಪ್ಪುತ್ತೇನೆ. ಶ್ರೀಮಂತ ಮತ್ತು ಬಡವರ ಮಧ್ಯೆಯಿಂದ ವೈಷಮ್ಯತೆ ನಿರ್ಮೂಲವಾದರೆ, ದೇಶದ ಅಭಿವೃದ್ದಿ ಸಾಧ್ಯ.

ಕೊನೆಯದಾಗಿ, ನಾನು ಸೀತಾರಾಮಯ್ಯನವರಿಗೆ , ಅರಿಕೆ ಮಾಡಿಕೊಳ್ಳುವುದೇನೆಂದರೆ, ಪುನಃ ಈಸಮಸ್ಯೆಯನ್ನು ದೇಶದ ಮತ್ತು ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ, ಪರಿಗಣಿಸಬೇಕು. ಭೂಸುಧಾರಣೆಗಾಗಿ, ಇಷ್ಟು ಭರದಿಂದ ನಾವು ಕ್ರಮ ತೆಗೆದುಕೊಳ್ಳುವುದು, ನನಗೆ ತೃಪ್ತಿಯಿಲ್ಲ. ಇಂಥ, ಯಾವುದೇ ಕಾರ್ಯಕ್ರಮವನ್ನು ನಾವು ಪರಿಶೀಲಿಸುವಾಗ, ಜಮೀನದಾರರನ್ನು ಅನಾವಶ್ಯಕವಾಗಿ ಯಾವುದೇ ಹಾನಿಗೆ ಗುರಿ ಮಾಡಬಾರದು. ಒಂದು ವೇಳೆ ಜಮೀನುದಾರರು, ಭೂಮಿಯನ್ನು ಒಂದು ಮಿತಿಯವರೆಗೆ ಸಾಗುವಳಿ ಮಾಡಲು ಬಯಸಿದರೆ, ಅವರಿಗೆ ಆ ರೀತಿಯ ಅನುಮತಿ ಕೊಡಬೇಕು. ಅಂಥ ವೇಳೆಯಲ್ಲಿ , ಸದನದಲ್ಲಿ ಕಾಯ್ದೆಯ ತಿದ್ದುಪಡಿಯನ್ನು ಮಂಡಿಸಬೇಕಾಗುತ್ತದೆ. ಕಾಯ್ದೆಯನ್ನು ತಿದ್ದುಪಡಿ ಮಾಡುವಾಗ, ಶ್ರೀ ಸೀತಾರಾಮಯ್ಯನವರ ಎಲ್ಲಾ ಸೂಚನೆಗಳನ್ನು ಗಮನದಲ್ಲಿಡುತ್ತೇನೆ. ನಂತರ ಕೂಡಲೇ ಆದಷ್ಟು ಬೇಗನೆ, ತಿದ್ದುಪಡಿಯ ಮಸೂದೆಯನ್ನು ಸದನದಲ್ಲಿ ತರುತ್ತೇನೆ.



# ವಿಧಾನ ಪರಿಷತ್ತು - ಮೈಸೂರು ಇನಾಂರದ್ದತಿಯ ಮಸೂದೆಯ ಮೇಲೆ ಜಂಟಿ ಸಲೆಕ್ಟ ಕಮಿಟಿಗೆ ಒಪ್ಪಿಗೆ ಕುರಿತು ಕಡಿದಾಳ ಮಂಜಪ್ಪನವರ ಸ್ಪಷ್ಟೀಕರಣ

**11 ನೇ, ಏಪ್ರಿಲ್1953**

**ಸಭಾಧ್ಯಕ್ಷರು:** ಮಸೂದೆಯ ತತ್ವಗಳಿಗೆ ಎಲ್ಲಾ ಸದಸ್ಯರು ಒಪ್ಪಿಕೊಂಡಿದ್ದಾರೆಂಬುದು ನನಗೆ ಅನಿಸುತ್ತದೆ. ಈಗ ಮಾನ್ಯ ಮಂತ್ರಿಗಳು ಉತ್ತರ ನೀಡುವರು.

**ಶ್ರೀ ಕಡಿದಾಳ ಮಂಜಪ್ಪ:** ಮಾನ್ಯರೇ , ಎಲ್ಲ ಸದಸ್ಯರು ಚರ್ಚೆಯಲ್ಲಿ ಭಾಗವಹಿಸಿ, ಕಾಯ್ದೆಯಲ್ಲಿನ ಕೆಲವು ಉಪ ಬಂಧಗಳಿಗೆ, ಸ್ವಾಗತ ಕೋರಿ, ಆದರ ಕೆಲವು ಉಪಬಂಧಗಳ ಬಗ್ಗೆ ಕೆಲವು ಆಕ್ಷೇಪಣೆಗಳನ್ನು ವ್ಯಕ್ತಪಡಿಸಿದ್ದಾರೆ. ಶ್ರೀ ಟಿ.ಎಸ್.ರಾಜಗೋಪಾಲ ಅಯ್ಯಂಗಾರ್ ಅವರು ಕಾಯ್ದೆಯ ಎಲ್ಲ ಉಪಬಂಧಗಳ ಬಗ್ಗೆ ಸವಿಸ್ತಾರವಾಗಿ ಚರ್ಚಿಸಿದ್ದಾರೆ. ಅದರ ಬಗ್ಗೆ ನಾನು ಈ ಹಂತದಲ್ಲಿ ಹೆಚ್ಚಿಗೆ ಏನೂ ಹೇಳುವ ಅವಶ್ಯಕತೆಯಿಲ್ಲ. ಏಕೆಂದರೆ , ಮಸೂದೆಯು ಸೆಲೆಕ್ಟ ಸಮಿತಿಯ ಎದುರು ಹೋಗಲಿದೆ. ಸಂಕ್ಷಿಪ್ತವಾಗಿ , ನಾನು ಇಲ್ಲಿ ನನ್ನ ಉತ್ತರ ನೀಡುತ್ತೇನೆ. ಶ್ರೀ ರಾಜಗೋಪಾಲ ಅಯ್ಯಂಗಾರರು ಮಸೂದೆಯ ಬಗ್ಗೆ ಪ್ರಸ್ತುತಪಡಿಸಿದಂತೆ, ಅದರಲ್ಲಿನ ಕೆಲವು ಮಧ್ಯವರ್ತಿಗಳನ್ನು ತೆಗೆದುಹಾಕಿ. ಸಾಗುವಳಿ ಮಾಡುವವನೇ ಭೂಮಿಯ ಒಡೆಯನನ್ನಾಗಿ ಮಾಡಬೇಕು. ಮಸೂದೆಯಲ್ಲಿ ಕೆಲವು ದೋಷಗಳಿರುವುದು ಸತ್ಯ. ಸೆಲೆಕ್ಟಸಮಿತಿಯು, ಅವುಗಳನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಿ, ಕೆಲವು ಅವಶ್ಯಕ ತಿದ್ದುಪಡಿಗಳನ್ನು ಮಾಡುತ್ತದೆ. ನನ್ನ ಮಿತ್ರ ಶ್ರೀ ರಾಜಗೋಪಾಲ ಅಯ್ಯಂಗಾರರು "ಸರಕಾರವು ಹಂಚಿಕೆದಾರನ ಮತ್ತು ದಳ್ಳಾಳಿಯ ಪಾತ್ರ ತೆಗೆದುಕೊಳ್ಳುವುದೆಂದು"ಹೇಳಿದ್ದಾರೆ. ಮಸೂದೆಯ, ಗೇಣಿದಾರರಿಂದ ವಿಮಾ ಕಂತು (ಪ್ರಿಮಿಯಂ)ಪಡೆಯುವ ಉಪಬಂಧಗಳಿಗೆ, ಅವರು ಆಕ್ಷೇಪಣೆ ಹಾಕಿದ್ದಾರೆ.

ಮಾನ್ಯರೆ, ಗೇಣಿದಾರರನ್ನು ಕಡಿಮೆ ಗೇಣಿದಾರರೆಂದು, ಖಾಯಂ ಕ್ವಾಸಿ(ಅರೆ) ಅರೆ ಸ್ವರೂಪದ ಗೇಣಿದಾರರನೆಂದು ಮತ್ತು ಸಾಮಾನ್ಯ ಗೇಣಿದಾರರೆಂದು ವರ್ಗೀಕರಿಸಲಾಗಿದೆ. ಅಲ್ಲದೆ, ಭೂಮಿಯ ಖಾಸ್ ಸ್ವಾಧೀನತೆಗಾಗಿ, ಅಲ್ಲಿ ಇನಾಮದಾರನಿರುವನು. ಕಡಿಮೆ ಗೇಣಿದಾರನು, ಬೇರ್ಪಡೆ ಹೊಂದಿದ ಗ್ರಾಮಗಳಲ್ಲಿ, ತನ್ನ ಸ್ಥಾನ ಹೊಂದಿ, ಅವನಿಗೆ ಭೂಮಿಯನ್ನು ಇನಾಮವಾಗಿ ಕೊಡಲಾಗಿದೆ. ಕಾರಣ, ಅವನು ಭೂಮಿಗೆ ಯಾವ ಪ್ರೀಮಿಯಂ ಕೊಡಲು ನಾವು ನಿರೀಕ್ಷಿಸಲು ಸಾಧ್ಯವಿಲ್ಲ. ಅವನು ಕೇವಲ ಸಾಮಾನ್ಯ ಭೂ ಕಂದಾಯ ಕೊಟ್ಟರೆ ಸಾಕು. ಒಬ್ಬ ವ್ಯಕ್ತಿಯು12ವರ್ಷಗಳವರೆಗೆ, ಭೂಮಿಯ ಸ್ವಾಧೀನತೆಯನ್ನು ಹೊಂದಿದರೆ, ಅವನು ಖಾಯಂ ಗೇಣಿದಾರನು. ಖಾಯಂ ಗೇಣಿದಾರನ ಪ್ರಸಂಗದಲ್ಲಿ, ಮಸೂದೆಯ ಪ್ರಕಾರ, 50ಪ್ರತಿ ಶತ ಮಾರುಕಟ್ಟೆಯ ಭೂಮಿಯ ಬೆಲೆ ಯನ್ನು ಸರಕಾರಕ್ಕೆ ಕೊಡಬೇಕಾಗುತ್ತದೆ. ನಮಗೆ ಗುರ್ತಿದ್ದ ಹಾಗೆ, ಸರಕಾರದ ಗ್ರಾಮಗಳಲ್ಲಿ , ಜಮೀನುದಾರರ ಅಡಿಯಲ್ಲಿ, ಭೂಮಿ ಸಾಗುವಳಿ ಮಾಡಲು ಖಾಯಂ ಗೇಣಿದಾರರಿದ್ದಾರೆ.



# ಗೇಣಿ ರೈತರ ಗುತ್ತಿಗೆ ಪ್ರಮಾಣದ ನಿಗಧಿ ಕುರಿತು

ಶ್ರೀ ಕಡಿದಾಳ್‌ಮಂಜಪ್ಪ:-ಗುತ್ತಿಗೆ ಪ್ರಮಾಣವನ್ನು ನಿಗಧಿಮಾಡುವುದಕ್ಕೆ ಸರ್ಕಾರಕ್ಕೆ ಅಧಿಕಾರವಿದೆ.

ಶ್ರೀ ಎಸ್.ಗೋಪಾಲಗೌಡ:-ಅದನ್ನು ಜಾಗ್ರತೆ ಸರ್ಕಾರ ಯಾವಾಗ ಮಾಡುತ್ತದೆ?

ಶ್ರೀ ಕಡಿದಾಳ್‌ಮಂಜಪ್ಪ:-ಆದಷ್ಟು ಜಾಗ್ರತೆ ಮಾಡುತ್ತೇವೆ.

ಶ್ರೀ ಎಚ್.ಎಂ.ಚನ್ನಬಸಪ್ಪ:- ದೇಶಕ್ಕೆ ಬೇಕಾದುದನ್ನು ಮಾಡುತ್ತೀರೋ ಅಥವಾ ಅವರುಹೇಳಿದಂತೆ ಮಾಡುತ್ತೀರೋ?

ಶ್ರೀ ಕಡಿದಾಳ್‌ಮಂಜಪ್ಪ:-ದೇಶಕ್ಕೆ ಬೇಕಾದ್ದನ್ನು ಮಾಡುತ್ತೇವೆ.

ಶ್ರೀ ಎಸ್.ಗೋಪಾಲಗೌಡ:-ರೈತರ ಹಿತದೃಷ್ಟಿ ತಾನು ಗೇಣಿ ಪಡೆದು, ಉಳುಮೆ ಮಾಡುತಕ್ಕಂಥ ಜಮೀನಿನಿಂದ ತನ್ನನ್ನು ಜಮೀನುದಾರರು ವಿನಾಕಾರಣ ಹೊರಗೆ ಹಾಕುವುದಿಲ್ಲ ಎನ್ನುವ ಒಂದು ಭರವಸೆ ಬೇಕು. Protected tenantsಅಂದರೆ ಒಬ್ಬನು ಜಮೀನು ಉಳುಮೆ ಮಾಡುತ್ತಾ ಇದ್ದರೆ ಆತನ ಹಕ್ಕು ಕಾಪಾಡಲ್ಪಟ್ಟಿದೆ, ರಕ್ಷಿಸಲ್ಪಟ್ಟಿದೆ ಎನ್ನುವ ಒಂದು ಆಶ್ವಾಸನೆ ಅವನಿಗೆ ಬೇಕು. ಎರಡನೆಯದಾಗಿ ಅವನು ಉಳುಮೆ ಮಾಡಿ ಬೆಳೆದಿದ್ದರಲ್ಲಿ ತನ್ನ ಜೀವನಕ್ಕೆ ಸಾಕಾಗುವಷ್ಟು ಮಾತ್ರ ಉಳಿಯುತ್ತದೆ ಎನ್ನುವ ಒಂದು ಭರವಸೆ ಕೂಡ ಪಿಕ್ಕದಾರನಿಗೆ ಇರಬೇಕು. ಹಾಗೆ ಮಾಡಿದರೆ ಗೇಣಿಯನ್ನು ಇಷ್ಟು ಪ್ರಮಾಣದಲ್ಲಿ ತಾನು ಜಮೀನುದಾರನಿಗೆ ಕೊಡಬೇಕೆನ್ನುವ ಭರವಸೆಯೂ ಕೂಡ ಉಂಟಾಗುತ್ತದೆ.ಈ ಮಸೂದೆಯು ಹಿಂದೆ ಈ ಸಭೆಯಲ್ಲಿ ತರಲ್ಪಟ್ಟಾಗ ಶ್ರೀಮಾನ್ ಚನ್ನಬಸಪ್ಪನವರೂ ಸಹ ಇಲ್ಲಿಯೇ ಇದ್ದರು ಎಂದು ಹೇಳುತ್ತೇನೆ. ಅವರ ವಾದದ ಪ್ರಕಾರ ಬೆಳೆ ಅಥವಾ ಬೆಳೆಗಳು ಎಂದು ಇದರಲ್ಲಿ ಸೇರಿಸಲ್ಪಟ್ಟಿತ್ತು. ಅವರು ಅದರ ಬಗ್ಗೆ ಬಹಳ ಒತ್ತಾಯ ಮಾಡಿದ್ದಾರೆ. ಇನ್ನೂ ಯಾವುದೇ ಬೆಳೆಯನ್ನು ಬೆಳೆಯಲ್ಲಿ ಅದರಲ್ಲಿಅರ್ಧ ಬೆಳೆಯು ಜಮೀನ್‌ದಾರನಿಗೆ ಬರಬೇಕು ಎಂಬುದನ್ನು ಈಸಭೆಯ ಮುಂದಿಟ್ಟು, ಈ ಮಸೂದೆ ಆಗುವ ಕಾಲದಲ್ಲಿ "ಬೆಳೆ ಅಥವಾ ಬೆಳೆಗಳು" ಎಂಬ ಶಬ್ದಗಳನ್ನು ಆ ಕಾನೂನಿನಲ್ಲಿ ಸೇರಿಸಿದರು. ಅದು ತಪ್ಪೆಂದು ನಾನು ಹೇಳುವುದಿಲ್ಲ. ಏಕೆಂದರೆ ನಮ್ಮ ದೇಶದಲ್ಲಿ ಎರಡು ತರಹ ಪ್ರಾಂತ್ಯಗಳಿವೆ.ಒಂದು ಮಲೆನಾಡು, ಇನ್ನೊಂದು ಬಯಲು ಸೀಮೆ, ಸ್ಥೂಲವಾಗಿ ಈ ರೀತಿ ಎರಡು ಭಾಗ ಮಾಡಿದ್ದೇವೆ. ಇದಲ್ಲದೆ, ಯಾವಾಗ್ಯೂ ಕ್ಷಾಮಕ್ಕೆ ಈಡಾಗುವ ಪ್ರದೇಶ, ಇರಿಗೇಷನ್ ಮುಖಾಂತರ ಹೆಚ್ಚು ವ್ಯವಸಾಯ ನಡೆಸುವ ಪ್ರದೇಶ ಎಂದೂ ಬೇರೆ ಬೇರೆ ರೀತಿಯಲ್ಲಿ ವಿಂಗಡಿಸಬಹುದು. ಆದರೆ ಸಾಮಾನ್ಯವಾಗಿ ಬರೀ ಬತ್ತವನ್ನೇ ಹೆಚ್ಚಾಗಿ , ಜೊತೆಗೆ ಅಲ್ಪಸ್ವಲ್ಪ ಅಡಿಕೆ ಕಬ್ಬು ಬೆಳೆಯುತಕ್ಕ ಪ್ರಾಂತ್ಯವೆಂದರೆ ಅದು ಮಲೆನಾಡು. ಬೇರೆ ಕಡೆಗಳಲ್ಲಿ ಗೋಧಿ ಜೋಳ ಕಬ್ಬು ಮತ್ತು ಇನ್ನೂ ಅನೇಕ ಕಾಳುಕಡ್ಡಿಗಳನ್ನೆಲ್ಲಾ ಬೆಳೆಯುತ್ತಾರೆ. ಹೀಗಿರುವಾಗ ಈ

ಆಕ್ಟಿನ್ನಲಿ ಹೇರಿರುವುದನಸು ನೋಡಿದರೆ, ಈ ಪ್ರದೇಶದಲ್ಲಿ ಪಿಕ್ಕ್ರಿಯಾದವರು ಬೆಳೆದರೆ ಬತ್ತ ಬೆಳೆಯಬೇಕು, ಏಕೆಂದರೆ ಅವಾಗಲೇ ಜಮೀನ್ದಾರನಿಗೆ ಗೇಣಿ ಕೊಡಬಹುದು, ಬಾಕಿ ಬೆಳೆ ಬೆಳೆದಾಗ ಏನೂ ಜಮೀನ್ದಾರನಿಗೆ ಸಲ್ಲಬಾರದು ಎಂದು ಹೇಳಿದೆ. ಇದನ್ನು ನಾನು ಒಪ್ಪುವುದಿಲ್ಲ. ಶ್ರೀಮಾನ್ ಚನ್ನಬಸಪ್ಪನವರು.crop of crops ಎಂದು ಇರಬೇಕೆಂದು ವಾದಿಸಿ ಎಲ್ಲದರಲ್ಲೂ ಸಮ ಅರ್ಧ ಕೊಡುವಂತಿರಬೇಕೆಂದು ವಾದ ಮಾಡಿದ್ದಾರೆ. ಒಂದು ದೃಷ್ಟಿಯಿಂದ ಅದೂ ಸಮಂಜಸವೇ. ಮಲೆನಾಡಿಗೆ ಈ ಕಾನೂನು ಅನ್ವಯಿಸಿತು ಎಂದು ಹೇಳಿದಾಗ ನಾವು ಬಹಳ ಕಳವಳಗೊಂಡಿದ್ದೇವೆ. ಏಕೆಂದರೆ ನಮ್ಮಲ್ಲಿ ಈಗಲೂ ಕೂಡ ಕೆಲವು ಜಮೀನ್ದಾರರಿದ್ದಾರೆ ಅವರು ಬತ್ತದ ಫಸಲಿನ ಜೊತೆಯಲ್ಲಿ ಹುಲ್ಲನ್ನೂ ಕೊಡಬೇಕೆಂದು ವಾದ ಮಾಡುತ್ತಾರೆ.

**ಒಬ್ಬ ಸದಸ್ಯರು**:-ವಾದ ಅಂದರೆ ಹಾಗೆಯೇ.

**ಶ್ರೀ ಎಸ್.ಗೋಪಾಲಗೌಡ**:-ಗೇಣಿಯಲ್ಲೂ ಅದೇ ರೀತಿ ಮಾಡುವವರಿದ್ದಾರೆ. ಆದರೆ ನಮ್ಮಲ್ಲಿ ಸಾಮಾನ್ಯವಾಗಿ ಗೇಣಿ ಮಾಡುವವರು ಹುಲ್ಲಗಳಲ್ಲಿ ಅರ್ಧಭಾಗ ಬರಬೇಕಿದ್ದುದನ್ನು ಯಾವ ರೀತಿ ತಿದ್ದುಪಡಿ ಮಾಡಿದೆಯೆಂದರೆ ಮೂಲ ಆಕ್ಟಿನ ಆರನೆ ಪ್ರಕರಣದಲ್ಲಿ ಬೆಳೆ ಅಥವಾ ಬೆಳೆಗಳು ಎಂದಿರುವ ಪದಕ್ಕೆ ಬದಲಾಗಿ ಮುಖ್ಯವಾದ ಫಸಲು ಎಂದು ಸೇರಿಸತಕ್ಕದ್ದು ಎಂದು ಹೇಳಿದೆ. ರೈತರ ಹಿತದೃಷ್ಟಿಯಿಂದ ಇದು ಅನುಕೂಲವಾಗಿದೆ. ಆದರೆ, ಇದೇ ಸಂದರ್ಭದಲ್ಲಿ ಎಷ್ಟು ಕೊಡಬೇಕು ಎಂಬುದನ್ನು ಸರ್ಕಾರದವರು ತಾವು ಗೊತ್ತು ಮಾಡುವುದಾಗಿ ಹೇಳುತ್ತಾರೆ. ರೈತರಿಗೆ ಮೊದಲು ಮುಖ್ಯವಾಗಿ ಕೊಡಬೇಕಾದ್ದು.

ಎರಡನೆಯದಾಗಿ ತನಗೆ ಮತ್ತು ಹೆಂಡತಿ ಮಕ್ಕಳಿಗೆ ಜೀವನಕ್ಕೆ ಸಾಕಾದಷ್ಟು ದವಸ ಉಳಿಯುತ್ತಿದೆ. ಎಂಬ ಭರವಸೆ ಕೊಡಬೇಕು. ಈ ಭರವಸೆಯನ್ನು ಈಗ ತಾವು ರೈತನಿಗೆ ಕೊಡುತ್ತಿಲ್ಲ. ಜಮೀನ್ದಾರನಿಗೆ ಎಷ್ಟು ಭಾಗ ಸಿಗಬೇಕು, ಅದು ೪ನೇಯ ಅಂಶವೇ, ೫ನೇಯ ಅಂಶವೇ , ೩ನೇ ಅಂಶವೇ ಎಷ್ಟು, ಎಂಬುದು ಈಗಲೇ ನಿರ್ಧಾರವಾಗಬೇಕು. ಅದನ್ನು ಸರ್ಕಾರದವರು ತಾವೇ ಮಾಡುತ್ತೇವೆ ಎಂದು ಹೇಳುವ ವಾದವನ್ನು ನಾನು ಒಪ್ಪುವುದಿಲ್ಲ. ಸರ್ಕಾರದವರು ಶೇಕಡಾ ಎಂಟು ಭಾಗದಷ್ಟು ರೈತರ ಹಿತರಕ್ಷಣೆ ಮಾಡುವುದಕ್ಕೆ ಹೊರಟಿದ್ದಾರೆ. ಎಂಬುದನ್ನು ಇಲ್ಲೇ ಸ್ಪಷ್ಟಪಡಿಸಬೇಕು. ಶ್ರೀ ಮಂಜಪ್ಪನವರು ಮಲೆನಾಡಿನ ಕಡೆ ಪ್ರವಾಸ ಮಾಡಬೇಕೆಂದು ಬಂದಾಗಲೆಲ್ಲಾ ನಾನು 1:3ಭಾಗ ಗೇಣಿ ಎಂದು ಗೊತ್ತು ಮಾಡಿದ್ದೇನೆ. ಎಂದುಹೇಳಿಕೊಂಡು ಓಡಾಡುವುದು. ಅಲ್ಲಿ ಮಾತ್ರ ವಾಸ್ತವಾಗಿ ಬೆಳೆದದ್ದರಲ್ಲಿ ಶೇಕಡಾ ೬೦ ಶೇಕಡಾ ೭೦ರವರೆಗೂ ತೆಗೆದುಕೊಳ್ಳುವವರು ಇದ್ದಾರೆ.

Sri. Kadidal Manjappa:- On a point of clarification, Sir Under Section 6, the Government have a right to fix the lower maximum in the case of certain areas. Accordingly in some parts of Malanad. one third is being prescribed as upper limit. That is the notification issued nearly 1 &1:2 years ago.



# ಗೇಣಿ ರೈತರು ರಶೀತಿ ಪಡೆಯುವ ಕುರಿತು ಚರ್ಚೆ

## ಶ್ರೀ ಎಸ್.ಗೋಪಾಲಗೌಡರು.1954

ಶ್ರೀ ಎಸ್.ಗೋಪಾಲಗೌಡರು:-ಯಾರು ಜೈಲು ಸೇರಿಗಿಂತ ದೊಡ್ಡ ಸೇರಿನಲ್ಲಿ ಅಳೆಸಬಾರದು. ಮಣಕ್ಕೆ ೫೦ ಸೇರಿಗಿಂತ ಹೆಚ್ಚಿಗೆ ತೆಗೆದುಕೊಳ್ಳಕೂಡದು ಎಂದು ಹೇಳಿದ್ದಾರೆ. ಆದರೆ ಮಂತ್ರಿಗಳು ಹೇಳಿದ ಆ ಆಕ್ಟನ ೮ನೇಯ ಸೆಕ್ಷನ್ ಜಾರಿಯಲ್ಲಿಲ್ಲ. ಕಾರ್ಯತಃ ಅನುಸರಿಸಲ್ಪಟ್ಟಿಲ್ಲ. ಈ ವಿಷಯವನ್ನು ನಾನುನೂ ಕಂದಾಯದ ಮಂತ್ರಿಗಳಿಗೆ ಹೊಸದಾಗಿ ಹೇಳಬೇಕಾಗಿಲ್ಲ. ಅದೇ ಹಳೆಯ ಕೊಳಗ, ಅದೇ ಹಳೆಯ ಖಂಡ್ಗ ಈಗಲೂ ಇದೆ. ನಮ್ಮ ಮಲೆನಾಡಿನ ಕಡೆ ಇನ್ನೊಂದು ವಿಚಿತ್ರವೆಂದರೆ, ಒಂದು ಎಕರೆಗೆ ಎಷ್ಟು ಗುಂಟೆ ಇರಬೇಕೋ ಅಷ್ಟೇ ಗುಂಟೆಗಳು ಕೂಡ ಅನೇಕ ಜಮೀನುಗಳ ವಿಷಯದಲ್ಲಿ ನಿಗಧಿಯಾಗಿಲ್ಲ. ಈ ಪ್ರಕಾವೆಲ್ಲಾ ಮಾಡಿ. ಒಂದು ಎಕರೆಗೆ ಮೂರು ಖಂಡಗ ಮಾಡಿ ಈ ಗೇಣಿ ಎಷ್ಟಿರಬೇಕೆಂಬ ಅಂಶವನ್ನು ಈ ಕಾನೂನಿನಲ್ಲಿ ತಿದ್ದುಪಡಿ ಮಾಡಬೇಕೆಂಬುದನ್ನು ಒತ್ತಾಯಪೂರ್ವಕವಾಗಿ ನಾನು ಹೇಳಬಯಸುತ್ತೇನೆ.

ಇನ್ನೊಂದು ಕಾರಣವೇನೆಂದರೆ;ಈಗಿರುವ ಕಾನೂನಿನಲ್ಲಿ ಗೇಣಿ ಅರ್ಧಕ್ಕೆ ಮೀರದಂತೆ ಎಂದಿದೆ. ಆದರೆ ಈ ಆರನೇಯ ಒಂದು ಅಂಶಕ್ಕೆ ಮೀರದಂತೆ ಎಂದು ಬರೆಯುವುದು ಸೂಕ್ತವೆಂದು ನಾನು ಭಾವಿಸುತ್ತೇನೆ.

ಈ ೮ ನೆಯ ಕ್ಲಾಜಿನಲ್ಲಿ ಪಲ್ಲ ಮಣ ಇತ್ಯಾದಿಗಳಿಂದ ಗೇಣಿಯನ್ನು ನಿಗದಿ ಮಾಡಿದ್ದರೂ ಕೂಡ ಈಗ ಹಾಲಿ ಅಭ್ಯಾಸದಲ್ಲಿರುವ ಪ್ರಕಾರ ಈ ನಿಯಮಾವಳಿಯನ್ನೂ ಜಮೀನ್ದಾರರು ಸರಿಯಾಗಿ ಅನುಸರಿಸುವುದಿಲ್ಲ. ಇನ್ನೂ ಒಂದು ಏನೆಂದರೆ ಕರಾರನ್ನು ಬರೆಸಿಕೊಳ್ಳುವಾಗ ಆ ಕರಾರಿನಲ್ಲಿ 10 ಸೇರಿನ ಮಣ, ೧೧ ಸೇರಿನ ಮಣ ಎಂದು ಬರೆಸಿ ಬಿಟ್ಟಿದ್ದಾರೆ. ಹೀಗೆ ಬರೆಸಿಕೊಂಡು ಬಿಟ್ಟಿರುವುದು ಕಾಂಟ್ರಾಕ್ಟ್ ಆಕ್ಟ್ ಪ್ರಕಾರ ಇರುವುದರಿಂದ ಇದನ್ನು ಯಾವ ರೀತಿಯಲ್ಲಿ ಕಡಿಮೆ ಮಾಡುವುದಕ್ಕೂ ಸಾಧ್ಯವಿಲ್ಲ. ಈಗ ಅಂತೂ ಅವರೆಲ್ಲಾ, ನಮ್ಮ ಮಲೆನಾಡಿನಲ್ಲಿ ಕಾನೂನಿನಲ್ಲಿರುವುದನ್ನು ಜಾರಿಗೆ ಇರದೆ, ಇದೇ ರೀತಿ ಅಳೆಸುತ್ತಿದ್ದಾರೆ. ಆ ಕರಾರು ಬರೆಯುವಾಗ ೧೧ ಸೇರನ ೧೦ ಮಣ ಎಂದು ಬರೆದಿರುವುದರಿಂದ ಪ್ರತಿಯೊಂದು ಮಣಕ್ಕೂ ಒಂದೊಂದು ಸೇರಿನಂತೆ ೧೦ ಮಣಗಳ ಗೇಣಿಯು ಜಮೀನ್ದಾರನಿಗೆ ಸಂದಾಯವಾದ ಮೇಲೂ ಆತನು ಇನ್ನೂ ೧೦ ಸೇರು ಬಾಕಿ ಇರುತ್ತದೆಂದು ಲೆಕ್ಕದಲ್ಲಿ ಬರೆದಿಡುತ್ತಾನೆ. ನನಗೆ ಗೊತ್ತಾಗಿರುವ ಪ್ರಕಾರ ಈ ರೀತಿಯಾಗಿ ಅನೇಕರು ತಮ್ಮ ತಮ್ಮ ಲೆಕ್ಕಪುಸ್ತಕಗಳಲ್ಲಿ ಇಷ್ಟಿಷ್ಟು ಬಾಕಿ ಇರುತ್ತದೆಂದು ಲೆಕ್ಕದಲ್ಲಿ ಬರೆದಿಡುತ್ತಾರೆ. ಬರೆದುಕೊಂಡುಹೋಗುತ್ತಿರುತ್ತಾರೆ. ಬಾಕಿ ಯಾವ ಕಾನೂನಿನಲ್ಲಿ ಏನೇ ಹೇಳಿರಲಿ, ಕಂಟ್ರಾಕ್ಟ್ ಆಕ್ಟ್ ಪ್ರಕಾರ ಆ ಕರಾರುಗಳನ್ನು ಅವರು ಬರೆಸಿಟ್ಟುಕೊಳ್ಳುತ್ತಿರುವುದರಿಂದ ಅವರು ಅದೇ ರೀತಿ ತೆಗೆದುಕೊಳ್ಳುತ್ತಿದ್ದಾರೆ. ಆದ ಕಾರಣ ಇದನ್ನೆಲ್ಲಾ ತಪ್ಪಿಸುವುದಕ್ಕೆ ಸರ್ಕಾರದವರು ಒಂದು ಸರಿಯಾದ ಕ್ರಮವನ್ನು ಕೂಡಲೇ ಕೈಗೊಳ್ಳಬೇಕಾಗಿದೆ.

ಇನ್ನು ಈ ಕಾನೂನಿನ ಗೇಣಿ ಕೊಟ್ಟಿದ್ದಕ್ಕೆ ರಶೀದಿ ಪಡೆಯಬೇಕು ಎಂದು ಹೇಳಿದೆ. ಈ ಅಂಶ ಹಳೇ ಕಾನೂನಿನಲ್ಲೂ ಇತ್ತು. ಇದರ ಬಗ್ಗೆ ಕೂಡ ಆ ಜಮೀನ್ದಾರರು ಗೇಣಿದಾರರಿಗೆ ಬಹಳ ತೊಂದರೆ ಕೊಡುತ್ತಿದ್ದಾರೆ. ಆ ಮಲೆನಾಡಿನಲ್ಲಿ ಜಮೀನ್ದಾರರನ್ನು ಗೇಣಿದಾರ ಒಂದು ರಶೀದಿ ಕೇಳುವುದೇ ಒಂದು ದೊಡ್ಡ ಅಪರಾಧವಾಗಿದೆ. ರೈತ ಆತನ ಮನೆ ಬಾಗಿಲಿಗೆ ಹೋದ ಕೂಡಲೇ ಓಹೋ ಏನು ಆಗಲೇ ರಶೀದಿ ಕೇಳುವುದಕ್ಕೆ ಬಂದು ಬಿಟ್ಟೆಯೋ?ನೀವು ಈತಕ್ಕೆ ಹೋಗು, ಎಂದು ಹೇಳಿ ಕಳುಹಿಸಿಬಿಡುತ್ತಾರೆ. ಆದರೆ ಇತ್ತ ಆ ರೈತ ಅನಕ್ಷರಸ್ಥನೂ ಮತ್ತು ಭಯ ಭಕ್ತಿಗಳಿಂದ ಕೂಡಿರತಕ್ಕವನೂ ಆಗಿರುವುದರಿಂದ ಜಮೀನ್ದಾರರುಗಳು ಹಾಗೆಯೇ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇವರು ಹೀಗೆ ಹಿಂದಕ್ಕೆ ಬೀಳುತ್ತಾ ಬಂದಿದ್ದಾರೆ. ಈ ರೀತಿಯಾಗಿ ಅನೇಕ ರೈತರಲ್ಲಿ ಈ ದಿವಸ ಆ ರಶೀದಿಗಳೇ ಇಲ್ಲದಿರುವುದರಿಂದ ಜಮೀನ್ದಾರನು ರೈತನಿಂದ ಜಮೀನನ್ನು ಬಿಡಿಸಿಕೊಳ್ಳಬೇಕೆಂದು ಇಷ್ಟಪಟ್ಟರೆ ಅಥವಾ ಮನಸ್ಸಿಗೆ ಬಂದರೆ ಆ ಕೂಡಲೇ ಆತ ಈ ರೈತನ ಮೇಲೆ ಮೂರು ವರ್ಷದ ಬಾಕಿ ನಿಂತಿದೆ ಎಂದು ದಾವ ಹಾಕುತ್ತಾನೆ. ಈ ರೀತಿಯಾಗಿ ಈ ದಿವಸ ನಮ್ಮಲ್ಲೆಲ್ಲಾ ನಡೆಯುತ್ತಿದೆ. ಕೋರ್ಟಿಗೆ ಜನರು ತಿರುಗುತ್ತಿದ್ದಾರೆ. ಆದುದರಿಂದ ಪ್ರತಿ ವರ್ಷವೂ ಗೇಣಿ ವಸೂಲಿ ಕ್ರಮ ಮುಗಿದ ಮೇಲೆ ಜಮೀನ್ದಾರನಾಗಿರತಕ್ಕವನು ಯಾವ ಯಾವ ರೈತನಿಂದ ಎಷ್ಟೆಷ್ಟು ಬಾಕಿ ನಿಂತಿದೆ ಎಂದು ಅವರು ಬರೆದಿಟ್ಟುಕೊಂಡಿರುತ್ತಾರೋ ಅದರ ಬಗ್ಗೆ ಒಂದು ಡಿಕ್ಲರೇಷನ್‌ನ್ನನ್ನು ಕೊಡಬೇಕೆಂಬುದಾಗಿ ತಾವು ಈ ಒಂದು ವಿಧಿಯನ್ನು ಈ ಕಾನೂನಿನಲ್ಲಿ ಸೇರಿಸಬೇಕೆಂದು ಹೇಳುತ್ತೇನೆ.

ಇನ್ನು ಈ ಗೇಣಿ ಕೊಡತಕ್ಕ ವಿಚಾರದಲ್ಲಿ ಈಗ ಹಾಲಿ ಇರತಕ್ಕಂಥ ರೀತಿಯಲ್ಲೇ ಇನ್ನೂ ಕೊಡುತ್ತಿದ್ದಾರೆ. ಮಲೆನಾಡಿನಲ್ಲಿ ಈ ಗೇಣಿಯು ಆ ಜಮೀನಿನ ಫಸಲಿನಲ್ಲಿ ಅರ್ಧಕ್ಕಿಂತ ಕಡಿಮೆಯಿರಬೇಕೆಂದೂ, ಬಯಸು ಸೀಮೆಯಲ್ಲಿ , ಅರ್ಧ ಭಾಗವಿರಬೇಕೆಂದೂ ನಿಯಮವಿದೆ. ಆದರೆ ಈ ನಿಯಮಾವಳಿಯಿಂದ ಗೇಣಿದಾರರಿಗೇನೂ ಅಷ್ಟಾಗಿ ಪ್ರಯೋಜನವಾಗಿಲ್ಲ. ತಾವು ಈ ಗೇಣಿಯ ಮೊತ್ತವನ್ನು ಇನ್ನೂ ಕಡಿಮೆ ಮಾಡಬೇಕು. ಬೇರೆ ಪ್ರಾಂತಗಳೆಲ್ಲೆಲ್ಲಾ ಹಾಗೆ ಮಾಡಿದ್ದಾರೆ. ತಾವು ಸಹ ಆ ರೀತಿಯಾಗಿ ಇಲ್ಲಿ ಕಡಿಮೆ ಮಾಡಬೇಕಾಗಿದೆ. ತಮಗೆ ಸಾಧ್ಯವಿದ್ದರೆ ಮಲೆನಾಡಿಗೂ ಮತ್ತು ಬಯಲು ಸೀಮೆಗಳೆರಡಕ್ಕೂ ಒಂದೇ ರೀತಿಯಾಗಿ ಈ ಗೇಣಿಯನ್ನು ನಿರ್ಧಾರ ಮಾಡಿ, ಇಲ್ಲವಾದರೆ ಮಲೆನಾಡಿಗೆ ಆರನೆಯ ಒಂದು ಭಾಗವಿರಬೇಕೆಂದೂ ಬಯಲು ಸೀಮೆಗೆ ಐದನೆಯ ಒಂದು ಭಾಗವಿರಬೇಕೆಂದೂ ತಾವು ಬದಲಾವಣೆ ಮಾಡಬೇಕು. ಆದರೆ ಅರ್ಧಕ್ಕೆ ಮೀರದಂತೆ ಗೇಣಿ ಕೊಡಬೇಕೆಂದೂ ತಾವು ಬದಲಾವಣೆ ಮಾಡಬೇಕು. ಅದರ ಅರ್ಧಕ್ಕೆ ಮೀರದಂತೆ ಗೇಣಿ ಕೊಡಬೇಕೆಂದು ಹೇಳಿರತಕ್ಕುದ್ದು ಹಳೇ ಬಡ್ಡಿ ದರದ ಮೇಲೆ ಲೆಕ್ಕಗಳೆಲ್ಲಾ ನಿಂತಿರುವ ಹಾಗೆ ಆಗುತ್ತದೆ.ಇಂದು ನಮ್ಮ ದೇಶದಲ್ಲಿ ರೈತರ ಜೀವನ ಸುಗಮವಾಗಿ ನಡೆಯುವಂತೆ, ಅವರಿಗೆ ಅನುಕೂಲ ದೊರೆಯುವಂತೆ ಗೇಣಿ ನಿರ್ಧಾರವಾಗಿಲ್ಲ. ಹಾಗೆ ತಮಗೆ ಈರೈತರ ಹಿತರಕ್ಷಣೆ ಮಾಡಲೇಬೇಕೆಂಬ ಆಕಾಂಕ್ಷೆ ಇದ್ದ ಭಾಗದಲ್ಲಿ ತಾವು ಈ ಗೇಣಿಯನ್ನು ಕಮ್ಮಿ ಮಾಡುವುದು ಸೂಕ್ತ. ಆದರೆ ನನಗೆ ಗೊತ್ತಿರುವ ಹಾಗೆ ಹೈದರಾಬಾದಿನಲ್ಲಿ ಈಗೇಣಿಯ ಪ್ರಮಾಣ ಆ ಭೂಮಿ ಕಂದಾಯದ ಐದು ಭಾಗಕ್ಕೆ ಮೀರದಂತೆ ಇರಬೇಕೆಂದು

ನಿರ್ಧರಿಸಲಾಗಿರುತ್ತದೆಯೆಂದು ಹೇಳಿದ್ದೇನೆ. ಅಲ್ಲಿ ಒಂದು ಜಮೀನಿನ ಕಂದಾಯ ಮೂರು ರೂಪಾಯಿಗಳಿದ್ದರೆ ಅದರ ಐದರಷ್ಟು, ಎಂದರೆ ೧೫ ರೂಪಾಯಿಗಳಾಯಿತು. ಈ ೧೫ ರೂಪಾಯಿಗಳಿಗೆ ಆ ಗೇಣಿ ಮೀರದಂತೆ ಇರಬೇಕೆಂದು ಅಲ್ಲಿ ಕಂದಾಯದ ಆಧಾರದ ಮೇಲೆ ನಿಗಧಿಮಾಡಿದ್ದಾರೆ. ನಮ್ಮ ದೇಶದಲ್ಲಿಯೂ ಕೂಡ ಅದೇ ರೀತಿಯಾಗಿ ಕಂದಾಯದ ಆಧಾರದ ಮೇಲೆ ನಿರ್ಧಾರ ಮಾಡಿ ಆ ಬಗ್ಗೆ ಗೇಣಿಯನ್ನು ಕಾಳಿನ ಅವಕಾಶವನ್ನು ಕಲ್ಪಿಸಿಕೊಟ್ಟ, ಹಾಗೆ ಆಗುತ್ತದೆ. ನಾನು ಈಗೇಣಿಯನ್ನು ಗೊತ್ತುಪಡಿಸುವ ಸಂದರ್ಭದಲ್ಲೇ ಸರ್ಕಾರದಿಂದ ನೋಟಿಫಿಕೇಷನ್ ಅಷ್ಟೇನೂ ರೈತರಿಗೆ ಸಹಕಾರಿಯಾಗುವುದಿಲ್ಲ ಎಂದು ತಿಳಿಸಿದ್ದೇನೆ. ಆದ್ದರಿಂದ ತಾವು ಈ ಮಸೂದೆಯಲ್ಲಿ ಆರನೆಯ ಒಂದು ಭಾಗದಷ್ಟು ಗೇಣಿ ಕೊಡಬೇಕೆಂಬ ಬಗ್ಗೆ ಒಂದು ತಿದ್ದುಪಡಿಯನ್ನು ಮಾಡಬೇಕೆಂದೂ ಆಗ ಇದರಿಂದ ಆ ರೈತರಿಗೆ ಸ್ವಲ್ಪ ಸಹಾಯ ಮಾಡಿದಂತೆ ಆಗುತ್ತದೆಂದೂ ನಾನು ಅಭಿಪ್ರಾಯ ಪಡುತ್ತೇನೆ.

ಆದರೆ ಈಗೇನು ಶ್ರೀಮಾನ್ ಭೀಮಪ್ಪನಾಯಕರೂ ಮತ್ತು ಶ್ರೀ ಚನ್ನಬಸಪ್ಪನವರೂ ಸಮಗ್ರ ರೈತಾಪಿ ಜನಗಳಿಗೆ ಅನುಕೂಲವಾಗುವ ಹಾಗೆ ಒಂದು ಜನರಲ್ ಬಿಲ್ಲನ್ನು ತಂದು ಈ ಗೇಣಿದಾರರಿಗಾಗಲಿ ಅಥವಾ ಆ ಜಮೀನ್ದಾರರಿಗಾಗಲಿ ಭೂಮಿಯ ಪರಮಾವಧಿ ಹಿಡುವಳಿ ಎಷ್ಟಿರಬೇಕೆಂಬುದನ್ನು ನಿರ್ಧಾರ ಮಾಡಬೇಕೆಂದು ಹೇಳಿದ್ದಾರೋ ಅದೇ ಒಂದು ಬಿಲ್ಲನ್ನು ಪ್ರತ್ಯೇಕವಾಗಿ ಸರ್ಕಾರದವರು ಬಹಳ ಬೇಗ ತಂದು ಅದನ್ನು ಕಾನೂನು ಕಡತಕ್ಕೇರಿಸಬೇಕೆಂದು ನಾನು ಸಹ ಮಾನ್ಯ ಕಂದಾಯದ ಮಂತ್ರಿಗಳಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಈಗ ಅವರು ವ್ಯಕ್ತಪಡಿಸಿರುವ ಪ್ರಕಾರ ಭೂಸುಧಾರಣೆ ಆಗಲೇ ಬೇಕಾಗಿದೆ. ಅದು ಆದ ಹೊರತು ನಾವು ಮತ್ತೆ ಯಾವ ಸುಧಾರಣೆಗಳನ್ನೂ ಮಾಡುವುದಕ್ಕಾಗುವುದಿಲ್ಲ. ಅದಕ್ಕಾಗಿಯೇ ಅವರು ಇದನ್ನು ಬಹಳವಾಗಿ ಒತ್ತಾಯಪಡಿಸುತ್ತಿದ್ದಾರೆ. ಮೈಸೂರು ಹೆಸರಿಗೆ ಮಾದರಿ ಸಂಸ್ಥಾನ. ಇಲ್ಲಿ ಕಾಂಗ್ರೆಸ್ ಸರ್ಕಾರ ಆಡಳಿತಕ್ಕೆ ಬಂದು ಎಂಟು ವರ್ಷಗಳ ಮೇಲಾಯಿತು. ಆದರೆ ಈಗ ಈ ಭೂ ಸುಧಾರಣೆಗಳ ಬಗ್ಗೆ ನಮ್ಮ ದೇಶದಲ್ಲಿ ಎಷ್ಟು ಪ್ರಗತಿ ಹೊಂದಿದೆಯೆಂದು ನೋಡಿದರೆ ಅದು ಏನೇನು ಆಗಿಲ್ಲವೆಂದು ಕಂಡು ಬರುತ್ತದೆ.

ಒಬ್ಬ ಸದಸ್ಯರು:-ಇನಾಂ ರದ್ದಿಯಾತಿ ಮಸೂದೆ ಮಾಡಿಲ್ಲವೇ?

ಶ್ರೀ ಎಸ್.ಗೋಪಾಲಗೌಡ:-ಹೌದು. ಆದರೆ ಅದಿನ್ನೂ ಕಾನೂನಾಗಿಲ್ಲವಲ್ಲಾ, ಅದಿನ್ನೂ ರಾಷ್ಟ್ರಾಧ್ಯಕ್ಷರ ಅಪ್ಪಣೆ ಪಡೆಯಲು ಕೇಂದ್ರಕ್ಕೆ ಹೋಗಿದೆ. ವಾಪಸ್ಸು ಬಂದಿಲ್ಲ. ಆದರೆ ಅದು ಹಿಂದಿರುಗಲು ಇಷ್ಟು ನಿಧಾನವಾಗಲು ಕಾರಣವೇನಿರಬಹುದೆಂಬುದನ್ನು ತಿಳಿದಿದ್ದರಲ್ಲಿ ನಾವು ಅನುಮೋದಿಸಿ ಕಳುಹಿಸಿರತಕ್ಕಂಥ ಬಿಲ್ಲು ರೈತರಿಗೇನೂ ಅಷ್ಟು ಪ್ರಗತಿದಾಯಕವಾಗಿಲ್ಲ. ಅದರಲ್ಲಿ ಟೆನೆಂಟ್ಸ್ ಆಫ್ ವಿಲ್ಲನ್ನು ಕೈ ಬಿಟ್ಟಿದ್ದೀರಿ, ಇಂಥಾ ಒಂದು ಮಸೂದೆಯನ್ನು ಶಾಸನ ಕಡಕ್ಕೇರಿಸಿದರೆ ಏನೂ ಪ್ರಯೋಜನವಾಗುವುದಿಲ್ಲ ಎಂದು ಅವರು ಅದನ್ನು ತಡೆ ಹಾಕಿದ್ದಾರೆಂದು ಗೊತ್ತಾಯಿತು.



# ಭೂಮಿ ಸಮಾಜದ ಸ್ವತ್ತು
# ವಿಧಾನಸಭೆಯಲ್ಲಿ ಶಾಂತವೇರಿ ಗೋಪಾಲಗೌಡರು

## 14ಏಪ್ರಿಲ್,1954ರಲ್ಲಿ ಮಾಡಿದ ಭಾಷಣ

**ಶಾಂತವೇರಿ ಗೋಪಾಲಗೌಡರು :** ನನ್ನ ಅಭಿಪ್ರಾಯದಲ್ಲಿ ಭೂಮಿಯು ಒಂದು ಆಸ್ತಿಯ ಪಟ್ಟಿಯಲ್ಲಿ ಸೇರಿರುವುದು ತಪ್ಪು. ಭೂಮಿಯನ್ನು ಆಸ್ತಿ ಪಟ್ಟಿಯಿಂದಬಂಧಮುಕ್ತ ಮಾಡಬೇಕು. ಅದು ಉತ್ಪತ್ತಿಯ ಸಾಧನವಾಗಿರುವುದರಿಂದ ಯಾರು ಭೂಮಿಯನ್ನು ಉಳುಮೆ ಮಾಡುತ್ತಾರೋ, ಯಾರು ಭೂಮಿಯ ಮೇಲೆ ಕೃಷಿ ಮಾಡಿ, ಕೆಲಸ ಮಾಡಿ ಅದರಿಂದ ಉತ್ಪನ್ನ ಮಾಡುತ್ತಾರೋ, ಆ ಉತ್ಪನ್ನ ಅವರ ಸೊತ್ತಾಗಿರಬೇಕು.

ಭೂಮಿ ಮಾರತಕ್ಕ ಕೊಳ್ಳತಕ್ಕ ವಸ್ತು ಆಗಬಾರದು. ಮನುಷ್ಯನ ಅಸ್ತಿತ್ವಕ್ಕೆ ಅದು ಬಲಿಯಾಗಬಾರದು ಎಂಬ ಒಂದು ನೀತಿಯನ್ನು ನಾವು ಇಟ್ಟುಕೊಳ್ಳುವುದು ಬಹಳ ಉಚಿತ ಎಂದು ಕಾಣುತ್ತೆ.

ನಮ್ಮ ದೇಶದಲ್ಲಿ ಈ ಭೂ ಸಮಸ್ಯೆಯನ್ನು ಪರಿಹಾರ ಮಾಡುವುದಕ್ಕೆ ಇದುವರೆಗೆ ನಾವು ಕಂಡ ಹಾಗೆ ಮೂರು ಮಾರ್ಗಗಳನ್ನು ನೋಡಿದ್ದೇವೆ.

ಒಂದು ಕಮ್ಯೂನಿಸ್ಟ್‌ರ ತೆಲಂಗಾಣ ಮಾರ್ಗ, ಎರಡು ಕಾನೂನು ಮಾಡಿ ಭೂಮಿಯನ್ನು ಸಮಾನವಾಗಿ ಹಂಚಿಕೆ ಮಾಡತಕ್ಕ ಮಾರ್ಗ, ಮೂರನೆಯದು ಇತ್ತೀಚೆಗೆ ವಿನೋಬಾ ಭಾವೆಯವರು ಆಚರಣೆಗೆ ತಂದಿರತಕ್ಕ ಭೂಮಿಯನ್ನು ಇದ್ದವರಿಂದ ದಾನವಾಗಿ ತೆಗೆದುಕೊಂಡು ಇಲ್ಲದವರಿಗೆ ಹಂಚಿಕೆ ಮಾಡತಕ್ಕ ಮಾರ್ಗ.

ಆದ್ದರಿಂದ ಮೈಸೂರು ಸಂಸ್ಥಾನದಲ್ಲಿ ಒಂದುಪ್ರಗತಿಯನ್ನು ಸಾಧಿಸಬೇಕಾದರೆ, ಬರೀ ಟೆನೆನ್ಸಿ ಕಾನೂನು ಅಥವಾ ರದ್ದಾಯತಿ ಮಸೂದೆ ಮಾಡಿ ನಾವು ಸ್ವಸ್ತವಾಗಿ ಇರುವುದಕ್ಕೆ ಸಾಧ್ಯವಾಗುವುದಿಲ್ಲ ಅಥವಾ ಅಷ್ಟಕ್ಕೆ ಬಿಟ್ಟರೆ, ನಮ್ಮ ರೈತರ ಅಭಿವೃದ್ಧಿ ಆಯಿತು ಅಥವಾ ಭೂಮಿ ಸಮಸ್ಯೆ ಪರಿಹಾರವಾಯಿತು ಎಂದು ತಿಳಿದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ನಮ್ಮ ಸಂಸ್ಥಾನದಲ್ಲಿ ಯಾರಿಗೇ ಆಗಲಿ ಅವರ ಕುಟುಂಬಕ್ಕೆ ಅನುಸಾರವಾಗಿ ಎಷ್ಟು ಭೂಮಿಯನ್ನು ಅವರ ಸ್ವಂತ ಶ್ರಮದಿಂದ ಉಳುಮೆ ಮಾಡಬಹುದೋ ಅಷ್ಟು ಭೂಮಿಗಿಂತ ಹೆಚ್ಚಿಗೆ ಭೂಮಿ ಯಾರು ಇಟ್ಟುಕೊಳ್ಳತಕ್ಕದ್ದಲ್ಲ. ಅದೆಲ್ಲಾ ಸರ್ಕಾರಕ್ಕೆ ಸೇರಬೇಕು.

ನಮ್ಮ ಸಂಸ್ಥಾನದಲ್ಲಿ ಈ ಭೂ ಸುಧಾರಣಾ ಸಮಸ್ಯೆ ಈಗ ಎರಡನೆ ಬಾರಿ ಸಭೆ ಮುಂದೆ ಬಂದಿದೆ. ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಿದರೆ ಸಾಕಾಗಿದೆ, ಇತರ ಪ್ರಾಂತಗಳಾದ ಮದರಾಸು, ಬೊಂಬಾಯಿ ಇತ್ಯಾದಿ ಭಾಗಗಳಲ್ಲಿ ಜಾರಿಯಲ್ಲಿರುವ ಕಾನೂನನ್ನು ಹೋಲಿಸಿದರೆ, ಇದು ಕಾನೂನೇ ಅಲ್ಲ ಇಂಥ ಒಂದು ಕಾನೂನು ಮಾಡುವುದರಿಂದ ರೈತರ ಯಾವ ಹಿತರಕ್ಷಣೆಯನ್ನು ಮಾಡುವುದಕ್ಕೆ ಸಾಧ್ಯವಿಲ್ಲ.

ಹಳೆಯ ಪದ್ಧತಿಗಳು ನಾಮಾವಶೇಷವಾಗಿ ಹೋದ ಹೊರತು ಅಂಥ ಒಂದು ಹೊಸರಾಜ್ಯ ನಿರ್ಮಾಣ ಅಸಾಧ್ಯ. ಹಿಂದಿನ ಎಲ್ಲಾ ಹಳೆಯ ಪದ್ಧತಿಗಳೂ ಅಳಿಯಬೇಕು. ಈ ಕಾಂಗ್ರೆಸ್ ಸರಕಾರದ ಗಮನವೆಲ್ಲಾ ಆ ಪಟ್ಟಿ ಭದ್ರತೆಯತ್ತ ಇದೆ.



# ಭೂಮಿ ಇಲ್ಲದ ಕೃಷಿಕರಿಗೆ ಭೂಮಿ ನೀಡುವ ಕುರಿತು

**4. ನೇ ಏಪ್ರಿಲ್,1955**

**Mr. Speaker** :- Government will reply to thatತಾವು ಹೇಳಿ ಇಂಥ ಜಮೀನು ಕೊಡಬೇಕು ಎಂದು.

**ಶ್ರೀ ಡಿ.ದೇವರಾಜ ಅರಸ್**:-ನನ್ನ ಅಭಿಪ್ರಾಯ ಹೀಗಿದೆ. ಬಡವರಿಗೆ,ಅವರು ಯಾವ ಕೋಮಿನವರೇ ಆಗಿರಲಿ ವ್ಯವಸಾಯವನ್ನು ಮೂಲ ಕಸುಬಾಗಿ ಅವಲಂಬಿಸತಕ್ಕವರಿಗೆ, ಉಚಿತವಾಗಿ ಜಮೀನು ಕೊಡಬೇಕು ಎಂದು. ಈಗ ಹಾಲಿ ಇರುವ ಪದ್ಧತಿ, ದರಖಾಸ್ತಿನ ಅರ್ಜಿಗಳು ಬಂದರೆ, ಆ ಜಮೀನುಗಳನ್ನು ಹರಾಜು ಮಾಡಿ ಯಾರು ಹೆಚ್ಚಿನ ಮೊಬಲಗಿಗೆ bidಮಾಡುತ್ತಾರೋ ಅವರಿಗೆ ಕೊಡುವುದು ಎಂಬುದು. ಈಚೆಗೆ ಅದು ಹೋಗಿ ಅಪ್ಸೆಟ್ ಪ್ರೈಸ್ ಮೇಲೆ ಬಡವರಿಗೆ ಕೊಡಬೇಕೆಂದು ಸರ್ಕಾರದವರು ಒಂದು ಆಜ್ಞೆ ಹೊರಡಿಸಿದರು. ಇದರ ಪ್ರಕಾರ ಒಂದು ಎಕರೆಯೂ ಜಮೀನಿಲ್ಲದ ರೈತನಿಗೆ ಜಮೀನು ಕೊಡಬೇಕೆಂದಿದೆ. ಇದರಲ್ಲಿ ಎರಡು ರೀತಿಯಾಗಿದೆ. ಅಪ್ಸೆಟ್ ಪ್ರೈಸ್ ಎಂದು ಹೇಳಿ ತೆಗೆದುಕೊಳ್ಳುವುದು ಒಂದು, ಇನ್ನೊಂದು ಉಚಿತವಾಗಿಕೊಡುವುದು . ಉಚಿತವಾಗಿ ಕೊಡುತ್ತಿರುವುದು ನಿಮ್ನ ತರಗತಿಯವರೆಂಬ ಒಂದೇ ಒಂದು ಜನಾಂಗಕ್ಕೆ ಸರ್ಕಾರದವರು ಒದಗಿಸಿಕೊಟ್ಟಿರತಕ್ಕ ಒಂದು ಅನುಕೂಲ. Depressed Class Rulesಪ್ರಕಾರ ಎರಡು ಎಕರೆಗಳನ್ನು ಅವರಿಗೆ ಉಚಿತವಾಗಿ ಕೊಡಬಹುದೆಂದಿದೆ, ಬಾಕಿ ಜನರಿಗೆ ಅಪ್ಸೆಟ್ ಪ್ರೈಸ್‌ನ್ನು ಕಟ್ಟುವುದೂ ಬಹಳ ಕಷ್ಟವಾಗಿದೆ. ಇನ್ನೊಂದು ತೊಂದರೆಯೂ ಇದೆ. ಸರ್ಕಾರಿ ಅಧಿಕಾರಿಗಳು ನಿಬಂಧನೆಗಳನ್ನು interpretಮಾಡುವುದರಲ್ಲಿ ಬಹಳ ತೊಂದರೆ ಕೊಡುತ್ತಾರೆ. ಹೇಗೆಂದರೆ, ಹಿಂದೆ ರೆವಿನ್ಯೂ ಕಮೀಷನರ್ ಆಫೀಸಿನಿಂದ ಒಂದು ಆಜ್ಞೆ ಹೊರಟಿತ್ತು. ಅಪ್ಸೆಟ್ ಪ್ರೈಸ್ ಎಂದರೆ 50ರೂಪಾಯಿ ಕೊಡಬೇಕೆಂದು ಹೇಳಿದ್ದರಿಂದ ಕೊನೆಗೆ ಜಮೀನು ತೆಗೆದುಕೊಳ್ಳಬೇಕೆನ್ನುವವರೂ ಬಿಟ್ಟು ಬಿಟ್ಟರು. ಜಮೀನು ತೆಗೆದುಕೊಳ್ಳುವುದೇ ತೊಂದರೆಯಾಗಿಬಿಟ್ಟಿತು. ಇದನ್ನು ಮಾನ್ಯ ರೆವಿನ್ಯೂ ಮಂತ್ರಿಗಳ ಗಮನಕ್ಕೆ ತರಲಾಗಿ ಅವರು ಹೇಳಿದರು. ಸರ್ಕಾರದವರು ಆ ರೀತಿ ಮಾಡಿರಲಿಲ್ಲ ರೆವಿನ್ಯೂ ಕಮೀಷನರಿಂದ ಕೈತಪ್ಪಿ...

**ಶ್ರೀ ಕಡಿದಾಳ್ ಮಂಜಪ್ಪ**:-ಕೈ ತಪ್ಪಿ ಎಂದು ನಾನು ಹೇಳಲಿಲ್ಲ, ರವಿನ್ಯೂ ಕಮೀಷನರು ಆ ಆಜ್ಞೆ ಹೊರಡಿಸಿದ್ದರು ಎಂದು ಹೇಳಿದೆ.

ಶ್ರೀ ಡಿ.ದೇವರಾಜ ಅರಸ್:-ಅದೇನೇ ಇರಲಿ, ಇಂತ ಆಜ್ಞೆ ಹೊರಡಿಸಿದ್ದರು. ಈಗ 50ರೂಪಾಯಿ ತೆಗೆದುಕೊಳ್ಳುತ್ತಿಲ್ಲವೆಂದು ಹೇಳುತ್ತಿದ್ದಾರೆ. ಅದೂ official ಆಗಿಹೇಳುತ್ತಿದ್ದಾರೋun-officialಆಗಿ

ಹೇಳುತ್ತಿದ್ದಾರೋ ಗೊತ್ತಿಲ್ಲ. ಇಪ್ಪತ್ತೈದು ರೂಪಾಯಿಗಳನ್ನಾದರೂ ಕನಿಷ್ಠ ರೂಪವಾಗಿ ತೆಗೆದುಕೊಳ್ಳಬೇಕೆಂದು ಮಾಡಿದ್ದಾರಂತೆ.

ಆ ಮೇಲೆ ಜಮೀನು ಕೊಡುವುದರಲ್ಲೂ ಅಮಲ್ದಾರರಿಗೆ, ಏನೂ ಅಧಿಕಾರ ಕೊಟ್ಟಿಲ್ಲ. ಸಬ್ ಡಿವಿಜನ್ ಆಫೀಸರೇ ಮೊದಲನೆಯ ಹಂತ. ಅವರಿಗೆ ನಾಲ್ಕು ಎಕರೆ, ಎರಡು ಎಕರೆ ಕೊಡುವುದಕ್ಕೆ ಅಧಿಕಾರವಿದೆ. ಎರಡನೆಯ ಹಂತವಾದ ಡೆಪ್ಯುಟಿ ಕಮೀಷನರಿಗೆ 10ಎಕರೆಗಳ ಒಳಪಟ್ಟು ಕೊಡಬೇಕೆಂದಿದೆ. ಅದರ ಮೇಲ್ಪಟ್ಟು10-15ಎಕರೆಗಳವರೆಗೆ ಕೊಡಬೇಕಾದರೆ ರೆವಿನ್ಯೂ ಕಮೀಷನರಿಗೆ ಅಧಿಕಾರವಿದೆ. ಅದರ ಮೇಲೆ ಕೊಡಬೇಕಾದರೆ ಸರ್ಕಾರಕ್ಕೆ ಬರಬೇಕೆಂದಿದೆ.

ಈಗ ಹಾಲಿ ಇರತಕ್ಕ ವ್ಯವಸ್ಥೆಯ ಪ್ರಕಾರ ಅಮಲ್ದಾರರಿಗೆ ಯಾವ ಅಧಿಕಾರವನ್ನೂ ಕೊಟ್ಟಿಲ್ಲ. ಡಿಪ್ರೆಸ್ಡ್ ಕ್ಲಾಸಿನವರಿಗೆ ಮಾತ್ರ ಎರಡು ಎಕರೆಗಳನ್ನು ಕೊಡಬಹುದು ಅಷ್ಟೆ. ಇದರಿಂದೇನಾಗಿಯೆಂದರೆ, ಅಮಲ್ದಾರರು ಜಮೀನು ಬಂಜರು ಪ್ರದೇಶ, ಕಾಡು ಪ್ರದೇಶ ಎಂದು ಹೇಳಿ ಸುಲಭ ಬೆಲೆಗೆ ಕೊಡಬಹುದೆಂದು ಶಿಫಾರಸ್ಸು ಮಾಡಿ ಸಬ್ ಡಿವಿಜನ್ ಆಫೀಸರಿಗೆ ಕಳುಹಿಸಿದರೆ, ಅಲ್ಲಿ ಫೈಲ್ ಜೊತೆಯಲ್ಲೇ ಯಾವನು ಅರ್ಜಿ ಕೊಟ್ಟಿರುತ್ತಾನೋ ಅವನು ಹೋಗಿ ಅಲ್ಲಿನ ಅದಿದೇವತೆಗಳಿಗೆ ತೃಪ್ತಿಯಾಗುವ ಹಾಗೆ ಪೂಜೆ ಮಾಡಿ ಬಂದರೆ, ಅಮಲ್ದಾರರು ಶಿಫಾರಸ್ಸು ಮಾಡಿರತಕ್ಕ 10-15ರೂಪಾಯಿಗಳಿಗೇ ಒಪ್ಪಿಕೊಂಡು ಸಬ್ ಡಿವಿಜನ್ ಆಫೀಸರು ಮಂಜೂರು ಮಾಡುತ್ತಾರೆ. ಒಂದು ವೇಳೆ ಅರ್ಜಿದಾರನು, ಅವನು ಬಡವ, ಅವಿದ್ಯಾವಂತನಾಗಿರುವುದರಿಂದ ತನ್ನ ಅರ್ಜಿಯನ್ನು ಹಿಂಬಾಲಿಸುವುದಕ್ಕೆ ತಿಳಿವಳಿಕೆಯಿಲ್ಲದೆ ಮನೆಯಲ್ಲೇ ಇದ್ದರೆ"ಅಮಲ್ದಾರರು ಮಾಡಿರುವ ಶಿಫಾರಸ್ಸು,10ರೂಪಾಯಿ ಬಹಳ ಕಡಿಮೆ, ಅದನ್ನು ಮಾಡಬೇಕು."ಎಂದು ಹೇಳಿ ಪುನಃ ಅಮಲ್ದಾರರಿಗೆ ಬಂದೇ ಬಿಡುತ್ತದೆ. ಹೀಗಾಗಿ ಮೇಲಕ್ಕೂ ಕೆಳಕ್ಕೂ ಫೈಲ್ ಓಡಾಡುತ್ತ ಕಾಲ ಹರಣವಾಗುತ್ತದೆ. ಈ ಕಾರಣದಿಂದ ಅನೇಕರಿಗೆ ಬಹಳ ಕಷ್ಟವಾಗಿದೆ. ಆದ್ದರಿಂದ, ಸರ್ಕಾರದವರಿಗೆ ನಾನು ಸಲಹೆ ಮಾಡುವುದೇನೆಂದರೆ, ಉಚಿತವಾಗಿ ಸರ್ಕಾರದವರು ಬಡವರಿಗೂ ಜಮೀನಿಲ್ಲದವರಿಗೂ ಹೇಗೋ ಕೊಡಬೇಕೆಂದಿದೆ. ವ್ಯವಸಾಯವೇ ಮುಖ್ಯ ಕಸುಬಾಗಿರುವವರಿಗೆ ಮಾತ್ರ ಕೊಡೋಣ. ಅಂಥವರಿಗೆ freeಯಾಗಿ ಕೊಡಬಹುದೆಂದ ಮೇಲೆ, ಅಮಲ್ದಾರರಿಗೇ ಈಅಧಿಕಾರ ಏಕೆ ಕೊಡಕೂಡದು!

ಇನ್ನೊಂದು ತೊಂದರೆಯಿರುವುದನ್ನು ನಾನು ಈ ಸಂದರ್ಭದಲ್ಲಿ ತರಬೇಕಾಗಿದೆ.ಪೋಡಿಂಗ್ ಫೀಜೆಂದು ಹಿಂದೆ ಆರು ರೂಪಾಯಿ ಮಾಡಿದ್ದಾರೆ. ಹತ್ತು ರೂಪಾಯಿನ ಜಮೀನಿಗೆ 20ರೂಪಾಯಿ ಪೋಡಿಂಗ್ ಫೀ!!ಇದು ಅನೇಕ ಬಡಜನರಿಗೆ ತೊಂದರೆಯಾಗಿ ಪರಿಣಮಿಸಿದೆ. ಇದನ್ನು ಸರಿಪಡಿಸಬೇಕು. ಜೊತೆಗೆ ಜಮೀನು ಕೊಡತಕ್ಕ ಅಧಿಕಾರವನ್ನು ಸೆಂಟ್ರಲೈಸ್ ಮಾಡಿಕೊಂಡಿರಕೂಡದು. ಸರ್ಕಾರದ ದೃಷ್ಟಿಯಿಂದ ಒಂದು ಸಂಸಾರಕ್ಕೆ ಕನಿಷ್ಠ ಪಕ್ಷ ಐದು ಎಕರೆ ಖುಷ್ಕಿ ಜಮೀನು ಕೊಡಬೇಕೆಂದಿದೆ. ತರಿ ಜಮೀನಾದರೆ

ಎರಡು ಎಕರೆಯಾದರೂ ಕೊಡಬೇಕೆಂದಿದೆ. ನನ್ನ ಅಭಿಪ್ರಾಯದಲ್ಲಿ ಐದು ಎಕರೆ ಜಮೀನು ಕೊಡುವುದನ್ನು ಅಮಲ್ದಾರರಿಗೆ ವಹಿಸುವುದು ಸೂಕ್ತ. ಅಧಿಕಾರ ಕೊಡುವುದಾದರೆ ನೇರವಾಗಿ ಅಮಲ್ದಾರರೇ ಕೊಡುವುದಕ್ಕೆ ಸಹಾಯಕವಾಗುತ್ತದೆ.

ಶ್ರೀ ಎಸ್.ಸಿದ್ದಪ್ಪ(ಮಾಗಡಿ):-ಕೊಡುವುದಕ್ಕಾಗುವುದಿಲ್ಲ.

ಶ್ರೀ ಡಿ.ದೇವರಾಜ ಅರಸ್:-ಮಾನ್ಯ ಸ್ನೇಹಿತರು ಆಗುವುದಿಲ್ಲ ಎಂದು ಹೇಳುತ್ತಾರೆ. ಅವರ ಅಭಿಪ್ರಾಯದಲ್ಲಿ ತಮಗೊಬ್ಬರಿಗೇ 100ಎಕರೆ ಜಮೀನಿದ್ದ ಮೇಲೆ ಇನ್ಯಾರಿಗೂ ಕೊಡಬಾರದು ಎಂದು. ಮುಖ್ಯವಾಗಿ ಬಡವರಿಗೆ, ವ್ಯವಸಾಯಗಾರರಿಗೆ ಜಾಗ್ರತೆ ಜಮೀನು ಸಿಕ್ಕಬೇಕಾದರೆ ಅಮಲ್ದಾರರಿಗೆ ಈ ಅಧಿಕಾರವನ್ನು ಕೊಡಬೇಕು. ಡಿಪ್ರೆಸ್ಡ್ ಕ್ಲಾಸ್‌ನವರ ವಿಷಯದಲ್ಲೂ ,ಈಗ ಅವರಿಗೆ ಎರಡು ಎಕರೆಗೆ ಜಾಸ್ತಿ ಕೊಡಬೇಕಾದರೆ ಸಬ್ ಡಿವಿಜನ್ ಆಫೀಸರಿಗೆ ಹೋಗಬೇಕೆಂದಿದೆ. ಎರಡು ಎಕರೆ ಜಮೀನು ಕೊಡುವ ಅಧಿಕಾರವುಳ್ಳ ಅಮಲ್ದಾರರಿಗೆ ಐದು ಎಕರೆ ಕೊಡುವ ಅಧಿಕಾರವನ್ನೂ ಕೊಟ್ಟರೆ ನಷ್ಟವಾಗುವುದು ಏನು?ಯಾರಿಗೂ ನಿಜವಾಗಿ ಸಹಾಯ ಮಾಡಬೇಕೆಂದು ಹೇಳುತ್ತಾರೋ ಅವರನ್ನು ಆಫೀಸಿನಿಂದ ಆಫೀಸಿಗೆ ತಿರುಗಿಸುವುದೂ, ಅವರು ಅಲ್ಲಿನವರನ್ನು ತೃಪ್ತಿಪಡಿಸುವುದಕ್ಕೆ ಹೋಗುವುದೂ ತಪ್ಪುತ್ತದೆ. ಆದ್ದರಿಂದ ಇದನ್ನು ಸರ್ಕಾರದವರು ಪರಿಶೀಲನೆ ಮಾಡಬೇಕೆಂದು ನನ್ನ ವಿನಂತಿ.



# ಮೈಸೂರು ಟೆನನ್ಸಿ ಕಾಯಿದೆಗಳ(ತಿದ್ದುಪಡಿ) ವಿಧೇಯಕ

**11ನೇ, ಮಾರ್ಚ್ ,1962**

ಶ್ರೀ ಡಿ.ದೇವರಾಜ ಅರಸ್:- ಈ ತಿದ್ದುಪಡಿಯಲ್ಲಿ ಸರ್ಕಾರದವರು1962ನೇಯ ಮಾರ್ಚಿ ಆರರವರೆಗೆ ಕಾಲಾವಕಾಶ ಕೇಳಿದ್ದರೂ ಸಹ ಅವರು ಅಲ್ಲಿಯವರೆಗೂ ಭೂಸುಧಾರಣೆ ಶಾಸನವನ್ನು ಜಾರಿಗೆ ತರದೆ ನಿಧಾನ ಮಾಡುತ್ತಾರೆಂಬುದಕ್ಕೆ ಯಾವ ಆಧಾರವು ಇಲ್ಲ ಆದರೆ ಆ ಭೂ ಸುಧಾರಣೆ ಶಾಸನವನ್ನು ಆದಷ್ಟು ಜಾಗ್ರತೆ ಜಾರಿಗೆ ತರಬೇಕೆಂದು ಒತ್ತಾಯ ಮಾಡುತ್ತೇನೆ. ಈಗಸರ್ಕಾರದವರು ಮುಂದಿ ಬಡ್ಜೆಟ್ ಅಧಿವೇಶನದೊಳಗೆ ಆ ತಿದ್ದುಪಡಿಗಳನ್ನು ತರುವುದಾಗಿ ಒಂದು ಭರವಸೆ ಕೊಟ್ಟರೆ ನಾನಿನ್ನು ಹಾಲಿ ಜಾರಿಯಲ್ಲಿರತಕ್ಕ ಗೇಣೀದಾರರ ಶಾಸನದ ಬಗ್ಗೆ ಹೇಳಬೇಕಾದ ಒಂದು ಎರಡು ವಿಷಯಗಳಿಗೆ, ಅವುಗಳನ್ನು ಈ ಮಾನ್ಯ ಸಭೆಯ ಗಮನಕ್ಕೆ ತರಲಿಚ್ಛಿಸುತ್ತೇನೆ.

ಮೈಸೂರು ಗೇಣಿದಾರರ ಶಾಸನದಲ್ಲಿರತಕ್ಕ ಮುಖ್ಯವಾದ ಎರಡು ಮೂರು ಅಂಶಗಳೇನೆಂದರೆ, ನಮ್ಮ ಹಳೇ ಮೈಸೂರು ಭಾಗದಲ್ಲಿ ಗೇಣಿದಾರರಿಗೆ ಇರತಕ್ಕ ಮೊದಲನೆಯ ರಕ್ಷಣೆ ಒಂದು ಏನೆಂದರೆ ಐದು ವರ್ಷಗಳ ತನಕ ಜಮೀನ್ದಾರರು ಗೇಣಿದಾರರ ಬಿಡಿಸಬಾರದು ಎಂಬುದು. ಎರಡನೆಯದು ಗೇಣಿ ಪರಿಮಿತಿಯ ನಿರ್ಧಾರ. ಮೂರನೆಯದು ಭೂಮಿಯನ್ನು ಮಾರಾಟ ಮಾಡುವಾಗ ಮೊದಲನೆಯ ಅವಕಾಶವನ್ನು ಗೇಣಿದಾರನಿಗೇ ಕೊಡಬೇಕೆಂಬ ನಿರ್ಬಂಧ ಇಷ್ಟು ಮಾತ್ರ ಗೇಣಿದಾರರಿಗೆ ಇರತಕ್ಕ ರಕ್ಷಣೆಗಳು. ಈ ಸಂಬಂಧದಲ್ಲಿ ನಾನು ನನ್ನ ಸ್ವಂತ ಅನುಭವಕ್ಕೆ ಬಂದಿರತಕ್ಕ ವಿಚಾರರನ್ನು ಮಾತ್ರ ಈಗ ಪ್ರಸ್ತಾಪ ಮಾಡಲಿಚ್ಛಿಸುತ್ತೇನೆ. ಬೊಂಬಾಯಿ ಕರ್ನಾಟಕ ಪ್ರಾಂತ್ಯದಿಂದ ಬಂದಿರತಕ್ಕ ನಮ್ಮ ಸ್ನೇಹಿತರುಗಳು ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಗೇಣಿದಾರರಿಗೆ ಈ ಶಾಸನದ ರಕ್ಷಣೆಗಳು ಸಾಕಷ್ಟು ದೊರೆಯುತ್ತಿವೆ ಎಂದು ಹೇಳುತ್ತಿದ್ದಾರೆ. ಆದರೆ ಹಳೇ ಮೈಸೂರು(ಭಾಗದಲ್ಲಿರತಕ್ಕ)ಗೇಣಿದಾರರಿಗೆ ಇದರಿಂದ ಯಾವ ರಕ್ಷಣೆಯೂ ದೊರೆಯುತ್ತಿಲ್ಲ. ಹೆಸರಿಗೆ ಮಾತ್ರ ಕಾನೂನಿರುತ್ತದೆ. ಇಂಥ ಹೆಸರಿಗೆ ಮಾತ್ರ ಇರತಕ್ಕ ಕಾನೂನನ್ನು ನಾವು ಇಲ್ಲಿಗೆ ಮೂರ್‍ನಾಲ್ಕು ವರ್ಷಗಳಿಂದಲೂ ಮುಂದುವರೆಸಿಕೊಂಡು ಬರುತ್ತಿದ್ದೇವೆ. ಆದರೆ ರಕ್ಷಣೆ ಮಾತ್ರ ದೊರೆಯುತ್ತಿಲ್ಲ. ಇಂಥ ಒಂದು ಕಾನೂನುಜಾರಿಯಲ್ಲಿ ಇಲ್ಲದಿದ್ದರೆ ಏನು ತೊಂದರೆಗಳು ಇರುತ್ತಿದ್ದವೋ ಆ ಎಲ್ಲ ತೊಂದರೆಗಳೂ ಈ ಕಾನೂನಿದ್ದರೂ ಇದ್ದೇ ಇವೆ. ಇದಕ್ಕೆ ಮೂಲ ಕಾರಣವೆಂದರೆ, ಇದನ್ನು ನಾನು ಈ ಹಿಂದೆ ಸಹ ಆಗಲೇ ಒಂದಾವರ್ತಿ ಹೇಳಿದ್ದೇನೆ. ಆಗ ನಾನು ಈ ಕಾರಣವನ್ನು ಹೇಳಿದ ಮೇಲೆ ಆಗಿದ್ದ ರೆವಿನ್ಯೂ ಮಂತ್ರಿಗಳಾದ ಶ್ರೀ ಎಂ.ಪಿ.ಪಾಟೀಲ್‌ರವರು ಒಂದು ಸರ್ಕಾರಿ ಆಜ್ಞೆಯನ್ನು ಹೊರಡಿಸಿ ಪ್ರತಿಯೊಂದು ತಾಲ್ಲೂಕಿನಲ್ಲೂ ಆಯಾ ತಾಲ್ಲೂಕಿನಲ್ಲಿರತಕ್ಕ ಪ್ರತಿಯೊಂದು ಹಳ್ಳಿಯಲ್ಲೂ ಎಷ್ಟು ಜನ ಗೇಣಿದಾರರುಗಳಿದ್ದಾರೆಂಬುದರ ಬಗ್ಗೆ ಒಂದು ರಿಜಿಷ್ಟರನ್ನು ಇಡಬೇಕೆಂದು ತಿಳಿಸಿದ್ದರು. ಆ ಗೇಣಿದಾರರ ಹೆಸರುಗಳನ್ನು ಆ ರಿಜಿಷ್ಟರಿನಲ್ಲಿ

ಬರೆದಿಡಬೇಕೆಂದು ತಿಳಿಸಿದ್ದರು. ಆ ಬಗ್ಗೆ ಪ್ರೋಫಾರ್ಮ ಸಹ ಪ್ರಿಂಟ್ ಮಾಡಿಸಿ ಎಲ್ಲ ಕಡೆಗೂ ಹಂಚಿಸಲಾಗಿತ್ತು. ಆದರೆ ಯಾವ ದಿವಸ ಮಂತ್ರಿಗಳಾಗಿದ್ದ ಎಂ.ಪಿ.ಪಾಟೀಲರು ಅಧಿಕಾರವನ್ನು ಕೈಬಿಟ್ಟರೋ ಅಂದೇ ಅವರು ಮಾಡಿದ್ದ ಆರ್ಡರು ಮೂಲೆಗೆ ಬಿತ್ತು.

**ಶ್ರೀ ಕಡಿದಾಳ್‌ಮಂಜಪ್ಪ:**-ಈಗಲೂ ಅದು ಜಾರಿಯಲ್ಲಿದೆ;ಬರೆದಿಡುತ್ತಿದ್ದಾರೆ.

**ಶ್ರೀ ಡಿ.ದೇವರಾಜ ಅರಸ್:**-ಶ್ರೀಮಾನ್ ಮಂಜಪ್ಪನವರು ಈಗ ಈ ವಿಚಾರವನ್ನು ಎತ್ತದಿದ್ದರೆ ಬಹಳ ಚೆನ್ನಾಗಿತ್ತು. ಅವರು ಈ ವಿಚಾರವನ್ನು ಅವರ ಮನಸ್ಸಿನಲ್ಲೇ ಇಟ್ಟುಕೊಂಡಿದ್ದರೆ ಚೆನ್ನಾಗಿತ್ತು. ಇತ್ತೀಚೆಗೆ ಶ್ರೀಮಾನ್ ಮಂಜಪ್ಪನವರಿಗೆ ಅಷ್ಟಾಗಿ ತಾಲ್ಲೂಕ್ ಕಚೇರಿಗಳ ವಿಚಾರ ಗೊತ್ತಿಲ್ಲ. ಏಕೆಂದರೆ ಅವರು ಮಂತ್ರಿಪದವಿಯಲ್ಲಿದ್ದರು. ಆ ಮಂತ್ರಿ ಪದವಿಯಲ್ಲಿ ಇದ್ದೂ ಅಧಿಕಾರಿಗಳನ್ನು ಮುಚ್ಚಿಟ್ಟುಕೊಳ್ಳತಕ್ಕ ಆ ಒಂದು ಧಾಟಿಯಲ್ಲೇ ಈಗಲೂ ಅವರು ಮಾತನಾಡುತ್ತಿದ್ದಾರೆ. ಪ್ರತಿ ದಿವಸವೂ ಕಚೇರಿಗೆ ತಿರುಗತಕ್ಕ ನಮಗೆ ಗೊತ್ತು ಶೇಕದಾರರು ಶ್ಯಾನುಭೋಗರು ಏನು ಕೆಲಸ ಮಾಡುತ್ತಾರೆ ಎನ್ನುವುದು.

ಈ ದಿವಸ ಯಾವ ತಾಲ್ಲೂಕ್ ಕಛೇರಿಯಲ್ಲೂ ಈ ರಿಜಿಷ್ಟರುಗಳನ್ನಿಟ್ಟಿಲ್ಲ. ಯಾವ ಯಾವ ತಾಲ್ಲೂಕಿನಲ್ಲಿ ಎಷ್ಟೆಷ್ಟು ಜನಗೇಣಿದಾರರಿದ್ದಾರೆ. ಅವರ ಹೆಸರೇನು ಎಂಬುದು ಯಾರಿಗೂ ಗೊತ್ತಿಲ್ಲ. ನನ್ನ ಭಾಗದ ತಾಲ್ಲೂಕ್‌ಗಳ ವಿಚಾರ ಹೇಳುವುದಾದರೆ ಅಲ್ಲಿ ಯಾರಿಗೂ ಈ ವಿಚಾರ ಗೊತ್ತೇ ಇಲ್ಲ. ಬೊಂಬಾಯಿ ಕರ್ನಾಟಕ ಪ್ರಾಂತ್ಯದಲ್ಲೇನೋ ಈ ವಿಚಾರ ಸರಿಯಾಗಿ ನಡೆಯುತ್ತಿದೆಯೆಂದು ನನ್ನ ಆ ಭಾಗದ ಸ್ನೇಹಿತರು ಹೇಳುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ವಿಚಾರ ನನಗೆ ಗೊತ್ತಿಲ್ಲ. ನಮ್ಮ ಹಳೇ ಮೈಸೂರು ಭಾಗದ ವಿಚಾರದಲ್ಲಿ ಹೇಳುವುದಾದರೆ ಕೆಲವು ತಾಲ್ಲೂಕುಗಳಲ್ಲಿ ತಹಶೀಲ್ದಾರರೇ ಈರಿಜಿಸ್ಟರನ್ನು ಮೈನ್‌ಟೇನ್ ಮಾಡದಿರಲು ಏನೇನು ಕಾರ್ಯಗಳನ್ನು ಮಾಡಬೇಕೋ ಅದೆಲ್ಲವನ್ನು ಮಾಡಿದ್ದಾರೆ. ಈ ವಿಚಾರವನ್ನು ರೆಕಾರ್ಡಿನಲ್ಲಿಟ್ಟರೆ ಮುಂದೆ ಗೇಣೀದಾರರಿಂದ ತಮಗೂ ಧಕ್ಕೆಬರುತ್ತದಲ್ಲ ಎಂದು ತಹಶೀಲ್ದಾರರೇ ಈ ರಿಜಿಸ್ಟರುಗಳನ್ನಿಡುವುದನ್ನು ತಪ್ಪಿಸುತ್ತಿದ್ದಾರೆ.

ಶ್ರೀ ಎಚ್.ಆರ್.ಕೇಶವಮೂರ್ತಿ:-ಪಾಯಿಂಟ್ ಆಫ್ ಆರ್ಡರ್ ಸಾರ್ ಅವರು ಹೇಳುತ್ತಿರುವುದು ಸರಿಯಲ್ಲ ಈಗ ಎಷ್ಟೋ ಕಡೆ ಆ ರಿಜಿಷ್ಟರ್‌ಗಳನ್ನು ಇಟ್ಟಿದ್ದಾರೆ.

Mr. Speaker- The Hon`ble members must know that request for information can never be a point of order.

ಶ್ರೀ ಡಿ.ದೇವರಾಜ ಅರಸ್:-ಈ ರಿಜಿಸ್ಟಾರ್‌ಗಳನ್ನು ಒತ್ತಾಯವಾಗಿ ಇಡಲೇಬೇಕೆಂಬ ಆಜ್ಞೆ, ಇನ್ನೂ ಜಾರಿಯಲ್ಲಿರುವುದಾದರೆ ಎಲ್ಲ ಕಡೆಗಳಲ್ಲೂ ಆ ರಿಜಿಸ್ಟಾರ್‌ಗಳನ್ನು ಇಡುವಂತೆ ಮಾಡಲಿ. ಇಲ್ಲವೇ ಆ ಆಜ್ಞೆರದ್ದಾಗಿದ್ದರೆ ಮತ್ತೆ ಅದನ್ನು ಹೊಸದಾಗಿ ಜಾರಿಗೆ ಕೊಡಲಿ.



# ಮೈಸೂರು ಭೂ ಸುಧಾರಣೆ (ತಿದ್ದುಪಡಿ ಮತ್ತು ಇತರೆ ಅವಕಾಶಗಳು) ವಿಧೇಯಕ,1972

### ದಿನಾಂಕ15.ಏಪ್ರಿಲ್,1972

**ಶ್ರೀ ಡಿ.ದೇವರಾಜ ಅರಸ್(ಮುಖ್ಯಮಂತ್ರಿಗಳು):**-ಮಾನ್ಯ ಅಧ್ಯಕ್ಷರೇ ಶ್ರೀ ಕಕ್ಕಿಲಾಯ ಅವರು ಕೋರ್ಟ್‌ಮಾಡುತ್ತಿರುವ ಸೆಕ್ಷನ್ ಪ್ರಕಾರ ಸರ್ಕಾರ ಆ ಡಿಫಿಕಲ್ಟೀಸನ್ನು ರಿಮೂವ್ ಮಾಡುವುದಕ್ಕಾಗಿ ಇದನ್ನು ತಂದಿಲ್ಲ. ಮಾನ್ಯ ಸದಸ್ಯರು ದಕ್ಷಿಣ ಕನ್ನಡ್ ಜಿಲ್ಲೆಯಿಂದ ಬರತಕ್ಕವರು, ಅವರಿಗೆ ಇದರ ವಿಚಾರ ಚೆನ್ನಾಗಿ ಗೊತ್ತಿದೆ. ಈ ದಿವಸ ಈ ಗೇಣೀ ಕೊಡದೆ ಕೋರ್ಟ್‌ಗಳಲ್ಲಿ ಹೆಚ್ಚಿಗೆ ಕೇಸುಗಳು ನಡೆಯುತ್ತಿರುವುದೆಲ್ಲಾ ಆ ದಕ್ಷಿಣ ಕನ್ನಡ ಜಿಲ್ಲೆಯಲ್ಲೇ. ಅಂಥ ಸಂದರ್ಭದಲ್ಲಿ ಗೇಣೀದಾರರಿಗೆ ಸ್ವಲ್ಪ ರಿಲೀಫ್ ಕೊಡೋಣ ಎಂದು ನಾವು ಇದನ್ನು ತಂದಿದ್ದೇವೆ. ಅವರೇ ಬೇಡ ಎಂದರೆ ನಾವಿನ್ನೇನು ಮಾಡೋಣ? ಈ ದಿವಸ ಏನು ಜಾರಿಯಲ್ಲಿದೆ ಅದನ್ನು ಹೀಗೆ ಮುಂದುವರಿಸಬೇಕು ಎನ್ನುವಂಥ ಉದ್ದೇಶದಿಂದೇನೂ ನಾವು ಇದನ್ನು ತಂದಿಲ್ಲ ಸರ್ಕಾರದವರು ಎಲ್ಲಾ ಲೀಗಲ್ ಆಸ್ಪೆಕ್ಟುಗಳನ್ನೂ ಏಗ್ಸಾಮಿನ್ ಮಾಡಿಸಿ ಒಂದು ಕಾಂಪ್ರಹೆನ್‌ಸೀವ್‌ಮೇಷರನ್ನು ಏಕೆ ತರಲಿಲ್ಲ ಎಂದು ಕೇಳುತ್ತಾರೆ. ಅದನ್ನು ಜೂನ್ ತಿಂಗಳಲ್ಲಿ ಮಾಡಬೇಕೆಂದಿದೆ. ಅದಕ್ಕೆ ಈಗ ಕಾಲಾವಕಾಶವಿರಲಿಲ್ಲ. ಇದನ್ನು ತಾತ್ಕಾಲಿಕವಾಗಿ ಈಗ ಯಾವ ಟೆನೆಂಟನ್ನು ಭೂಮಿಯಿಂದ ಹೊರಹಾಕಲು ಕ್ರಮಗಳನ್ನು ನಡೆಸಲಾಗುತ್ತದೋ ಅಂಥ ಸಂದರ್ಭಗಳಲ್ಲಿ ಮಾತ್ರ ಇದರಿಂದ ಅನುಕೂಲವಾಗಲೆಂದು ತರಲಾಗಿದೆ. ಇದರಿಂದ ಆ ಗೇಣಿದಾರರಿಗೆ ಇಮ್ಮಿಡಿಯೆಟ್ ರಿಲೀಫ್ ಸಿಗುತ್ತದೆ.

**ಶ್ರೀ ಬಿ.ವಿ. ಕಕ್ಕಿಲಾಯ:**-ನಾನೀಗ ಲೀಗಲ್ ಅಸ್ಪೆಕ್ಟ್ಸನ್ನು ಚರ್ಚೆ ಮಾಡುತ್ತಿಲ್ಲ. ಅದರ ಪ್ರಮೇಯವೂ ಈಗಿಲ್ಲ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದದ್ದು ಈಭೂಸುಧಾರಣೆಯ ಕಾನೂನನ್ನು ತಂದುದು 1966ರಲ್ಲಿ ಇಂದು ನಾವು 1972ರಲ್ಲಿ ಇದ್ದೇವೆ. ಕೆಲವು ಗೇಣಿದಾರರು ಕೊಡಬೇಕಾದ ಗೇಣೀ ಹಣ ಬಾಕಿ ನಿಂತಿದೆ. ಹಾಗೆ ಇಂದು ಬಾಕಿ ನಿಂತಿರತಕ್ಕ ಮೊಬಲಗಾದರೂ ಬಹಳ ದೊಡ್ಡದು. ಅಷ್ಟು ದೊಡ್ಡ ಮೊತ್ತವನ್ನು ಕೊಟ್ಟು ಗೇಣಿದಾರನಾಗಿ ಉಳಿಯುವುದಕ್ಕಿಂತ ಅದೇ ಹಣ ಅವನಲ್ಲಿದ್ದರೆ ಬೇರೆ ಅವನು ಎಲ್ಲಿಯಾದರೂ ಅದಕ್ಕಿಂತಲೂ ಉತ್ತಮವಾದ ಮತ್ತು ಭೂಮಾಲೀಕನಿಗೂ ಇರತಕ್ಕ ಸಂಬಂಧ ಇನ್ನೂ ಹಾಗೇ ಮುಂದುವರಿಯತಕ್ಕ ಸಂದರ್ಭವಿದೆ. ಆ ದಿವಸ ನಾವೆಲ್ಲರೂ ಏನು"ಭೂಮಿಯನ್ನು ಉಳುವವನೇ ಹೊಲದ ಒಡೆಯನಾಗಬೇಕು"ಎಂದು ಹೇಳಿದ್ದೇವೋ ಅದು...

**ಶ್ರೀ ದೇವರಾಜ ಅರಸ್:**-ಈ ಬಿಲ್ಲನ್ನು ತಂದ ಉದ್ದೇಶ ಏನೆಂಬುದನ್ನು ಈಗಾಗಲೇ ಮಾನ್ಯ ರೆವಿನ್ಯೂ ಮಂತ್ರಿಗಳು ತಿಳಿಸಿರಬೇಕು. ಇದರಲ್ಲಿ ಮುಖ್ಯವಾಗಿ ಎಲ್ಲರೂ ಗಮನಿಸಬೇಕಾದಂಥ ಒಂದಂಶ ಏನೆಂದರೆ ಹಿಂದೆ ಈ ಶಾಸನ ಸಭೆಗೆ ಚುನಾವಣೆಗಳು ನಡೆಯುವ ಮುನ್ನ ಹೈಕೋರ್ಟಿನಲ್ಲಿ ಗೇಣಿ

ಕೊಡದೆ ಬಾಕಿ ನಿಲ್ಲಿಸಿಕೊಂಡಿದ್ದ ಟೆನೆಂಟುಗಳು ಎವಿಕ್ಟ್ ಮಾಡತಕ್ಕ ತೀರ್ಪನ್ನು ಆ ಕೋರ್ಟಿನಿಂದ ಕೊಡಲಾಗುತ್ತಿತ್ತು. ಅದಕ್ಕೆ ಅವಕಾಶವಿದೆ. ಅಲ್ಲದೆ ಗೇಣೀ ಕೊಡದೆ ಈ ಬಾಕಿಯನ್ನು ನಾಲ್ಕು ಐದು ವರ್ಷಗಳ ಕಾಲ ಹಾಗೇ ನಿಲ್ಲಿಸಿಕೊಂಡು ಬಂದಿದ್ದರೆ ಅಂಥವರ ಬಗ್ಗೆ ಆ ಬಾಕಿ ನಿಂತಿರತಕ್ಕ ಎಲ್ಲ ವರ್ಷಗಳ ಗೇಣಿಯನ್ನೂ ಒಂದೇ ಗಂಟಿನಲ್ಲಿ ಒತ್ತಾಯಮಾಡಿ ವಸೂಲ್ಮಾಡಿಕೊಳ್ಳತಕ್ಕ ಬಗ್ಗೆ ಕೋರ್ಟಿನಲ್ಲಿ ಕೇಸ್ ಹಾಕುವುದಕ್ಕೆ ಜಮೀನ್ದಾರನಿಗೆ ಕಾನೂನು ಪ್ರಕಾರ ಅವಕಾಶವಿದೆ. ಆಗ ಗೇಣಿದಾರನು ಬಾಕಿಯನ್ನು ಪಾವತಿ ಮಾಡಿದಿದ್ದರೆ ಅವನನ್ನು ಇವಿಕ್ಟ್ ಮಾಡಿ ಆಗಿದೆ. ಇನ್ನು ಕೆಲವರನ್ನು ಇವಿಕ್ಟ್ ಮಾಡತಕ್ಕ ಪ್ರೊಸೆಸ್ಸಿನಲ್ಲಿದ್ದಾರೆ. ಅಂಥ ಒಂದು ಸಂದರ್ಭವಿದ್ದ ಕಾರಣ ಸರ್ಕಾರಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಅನೇಕ ಮನವಿಗಳು ಬಂದಿವೆ. ಇದೇ ವಿಚಾರದಲ್ಲಿ ಹಿಂದಿದ್ದ ರಾಜ್ಯಪಾಲರಿಗೂ ಮನವಿಗಳು ಬಂದಿದ್ದವು. ಕಳೆದ ಚುನಾವಣೆಗಳ ಕಾಲದಲ್ಲೂ ಮಾನ್ಯ ಪ್ರಧಾನ ಸಚಿವರು ದಕ್ಷಿಣ ಕನ್ನಡಜಿಲ್ಲೆಯಲ್ಲಿ ಪ್ರರಾಸಕ್ಕೆಗೊಂಡಿದ್ದ ಕಾಲದಲ್ಲೂ ಕೂಡಾ ಅನೇಕರು ಅವರಿಗೆ ಈಸಂಬಂಧರಾದ ಮನವಿಗಳನ್ನು ಅರ್ಪಿಸಿದ್ದರು. ಹಾಗೆ ಹೊರಗೆ ಹಾಕತಕ್ಕ ಟೆನೆಂಟುಗಳನ್ನು ತಡೆಗಟ್ಟುವುದಕ್ಕೆ ಕ್ರಮ ಕೈಗೊಳ್ಳಲು ಚುನಾವಣೆಗಳು ನಡೆಯುವುದಕ್ಕೆ ಸ್ವಲ್ಪವೇ ಕಾಲ ಉಳಿದಿತ್ತು. ಆಗ ಒಂದು ಆರ್ಡಿನೆನ್ಸ್‌ನ್ನು ಹೊರಡಿಸುವುದಕ್ಕೆ ಸಾಧ್ಯವಿಲ್ಲವೇ, ಎಂಬ ವಿಚಾರದಲ್ಲಿ ನಾನು ಕೇಂದ್ರ ಸರ್ಕಾರಕ್ಕೆ ಒಂದು ಸಲಹೆ ಕೇಳಿದ್ದೆ. ಆಗ ಕೇಂದ್ರ ಸರ್ಕಾರದಿಂದ ಚುನಾವಣೆಗಳು ಕೇವಲ ಒಂದು ತಿಂಗಳ ಕಾಲದಲ್ಲೇ ನಡೆಯುತಕ್ಕವುಗಳಿದ್ದ ಕಾರಣಹಾಗೆ ಆರ್ಡಿನೆನ್ಸ್‌ನ್ನು ಹೊರಡಿಸುವುದು ಸೂಕ್ತವಾದುದಲ್ಲ ಅದರಿಂದ ಆ ಚುನಾವಣೆಗಳ ಮೇಲೆ ಪರಿಣಾಮವನ್ನು ಬೀರಬಹುದೆಂದು ಹೇಳಿದ್ದರಿಂದ ಆಗ ಅದನ್ನು ನಿಲ್ಲಿಸಿತ್ತು. ಚುನಾವಣೆಗಳು ನಡೆದ ನಂತರ ಇಂಥ ಒಂದು ಕ್ರಮವನ್ನು ಕೈಗೊಳ್ಳಬಹುದೆಂದು ಕೇಂದ್ರ ಸರ್ಕಾರ ಇದಕ್ಕೆ ಒಪ್ಪಿಗೆಯನ್ನು ನೀಡಿತ್ತು. ಆದರೆ ಸಮಗ್ರವಾಗಿ ಆಕ್ಟ್‌ನ್ನೆಲ್ಲಾ ತಿದ್ದುಪಡಿ ಮಾಡುವತನಕ ಇವರನ್ನು ಹೊರಗೆ ಹಾಕತಕ್ಕ ಕೆಲಸ ಮುಂದುವರಿಯುತ್ತಲೇ ಇರುತ್ತದಲ್ಲ ಅದನ್ನು ತಡೆಗಟ್ಟಲು ಈ ಮಸೂದೆಯನ್ನು ತರಲಾಗಿದೆ.

ಇನ್ನು ಉಳಿದ ವಿಷಯಗಳ ಬಗ್ಗೆ ಅಂದರೆ ಗೇಣಿದಾರನಿಗೂ ಭೂಮಾಲೀಕನಿಗೂ ಇರಬೇಕಾದ ಸಂಬಂಧ. ಫ್ಯಾಮಿಲಿ ಹಿಡುವಳಿ, ಸೀಲಿಂಗ್ ಲಿಮಿಟ್ ಇತ್ಯಾದಿಗಳನ್ನೆಲ್ಲಾ ಸರಿಪಡಿಸಲು ಒಂದುಕಾಂಪ್ರಹೆನ್‌ಸೀವ್ ಬಿಲ್ಲನ್ನು ಜೂನ್ ತಿಂಗಳಲ್ಲಿ ತಂದು ಅದನ್ನೂ ಪಾಸ್ ಮಾಡೋಣ. ಆದರೆ ಹಾಲಿ ಇರತಕ್ಕ ಗೇಣೀದಾರರನ್ನು ಭೂಮಿಯಿಂದ ಹೊರ ಅಟ್ಟುತ್ತಿರುವುದನ್ನು ಮೊದಲು ತಡೆಗಟ್ಟ ಬೇಡವೇ?ಒಂದು ಉದ್ದೇಶದಿಂದ ಇದನ್ನು ತಂದಿದ್ದೇವೆ. ಅಷ್ಟೇ ಶಿವಾಯಿ ಇರತಕ್ಕ ಮಾಮೂಲನ್ನೇ ಮುಂದುವರಿಸುವುದಕ್ಕಾಗಿ ಇದನ್ನು ತಂದಿಲ್ಲ. ಉಳುವವನು ಹೊಲದ ಒಡೆಯನನ್ನಾಗಿ ಮಾಡುತ್ತೇರೆಂದು ಚುನಾವಣಾ ಪ್ರಣಾಳಿಕೆಯಲ್ಲಿ ಬೇರೆ ನಮೂದಿಸಲಾಗಿತ್ತು. ಅದನ್ನು ತಾವೆಲ್ಲರೂ ಪತ್ರಿಕೆಗಳಲ್ಲಿ ಓದಿರಬಹುದು. ಈಗ ತಕ್ಷಣ ಭೂಮಿ ಕಿತ್ತುಕೊಳ್ಳುವುದನ್ನು ತಪ್ಪಿಸುವುದಕ್ಕಾಗಿ ಇದನ್ನು ತರಲಾಗಿದೆ.

**ಶ್ರೀ ಬಿ.ವಿ. ಕಕ್ಕಿಲಾಯ:**-ಸರ್ಕಾರದವರು ಇನ್ನು ಒಂದು ತಿಂಗಳ ಅವಧಿಯಲ್ಲೇ ಕಾಂಪ್ರಹೆನ್‌ಸೀವ್ ಮೆಷರನ್ನು ತರುವವರಿದ್ದಾರೆ. ಎಂದು ಮಾನ್ಯ ಮಂತ್ರಿಗಳು ಹೇಳುತ್ತಿದ್ದಾರೆ. ಇದರಲ್ಲಿ ಈಗ ಎರಡು ವರ್ಷಗಳ ಗೇಣಿಯನನು ಕೊಟ್ಟರೆ ಒಕ್ಕಲನ್ನು ಎಬ್ಬಿಸಬಾರದು ಎಂದು ಹೇಳಿದೆ. ನಾನು ಹೇಳುತ್ತಿರುವುದು ಈ ಎರಡು ವರ್ಷಗಳ ಗೇಣಿಯನ್ನು ಕೊಡದಿದ್ದರೂ ಗೇಣೀದಾರರನ್ನು ಕಿತ್ತುಹಾಕಬಾರದು. ಆ ರೀತಿ ಒಂದು ಆಜ್ಞೆ ಹೊರಡಿಸಿ ಎಂದು ಹೇಳುತ್ತಿದ್ದೇನೆ.

**ಶ್ರೀ ಡಿ.ದೇವರಾಜ ಅರಸ್:**-ಡಿಫಿಕಲ್ಟೀಸ್ ಏನು ಬರಬಹುದೋ ಅವನ್ನು ಪರಿಶೀಲಿಸೋಣ, ಈಗ ಗೇಣೀ ಕೊಡುವವರು ಯಾರು ಇದ್ದಾರೆ ಅವರು ಹಿಂದಿನ ಬಾಕಿಯನ್ನು ಕೊಡದಿದ್ದರೆ ಎವಿಕ್ಟ್ ಮಾಡಲು ಹೋದಾಗ ಈ ಪಾಯಿಂಟ್ ಬರುತ್ತದೆ. ನಾಳೆ ಕೊಡುವವರು ಕೊಡುವುದಿಲ್ಲ. ಯಾರು ಕೊಟ್ಟಿಲ್ಲ ಅವರು ಕೊಡುವ ಹಾಗಿಲ್ಲ. ಅದು ಸರಿಯೆಂದು ಕಂಡರೆ ಮುಂದೆ ಯೋಚನೆ ಮಾಡೋಣ.



# ಭೂಸುಧಾರಣೆ ಕಾಯ್ದೆ ರಾಷ್ಟ್ರಪತಿ ಅಂಗೀಕಾರ ದೊರೆತ ನಂತರ ರಾಜ್ಯಪಾಲರ ಭಾಷಣದಲ್ಲಿ ವಿಷಯ ಪ್ರಸ್ತಾಪ. ಈ ಕುರಿತ ಚರ್ಚೆಯಲ್ಲಿ ಶ್ರೀ ಬಿ.ವಿ. ಕಕ್ಕಿಲಾಯರು.

**ದಿನಾಂಕ 28ನೇ, ಫೆಬ್ರುವರಿ, 1974**

ಶ್ರೀ ಬಿ.ವಿ. ಕಕ್ಕಿಲಾಯರು.

ಭೂಸುಧಾರಣೆ ಬಗ್ಗೆ ಒಂದೆರಡು ಮಾತು. ಭೂ ಸುದಾರಣಾ ಶಾಸನಕ್ಕೆ ರಾಷ್ಟ್ರಪತಿಯವರ ಅಂಗೀಕಾರ ದೊರೆತಿದೆ. ಎಂದು ಹೇಳಿದ್ದಾರೆ. ಅದು ಬಹಳ ಒಳ್ಳೆಯದು. ಇದರಲ್ಲಿ ನಾನು ಕೇಳಬೇಕಾಗಿರುವ ಒಂದು ವಿಚಾರವಿದೆ. ಏನೆಂದರೆ 1972ರ ಡಿಸೆಂಬರ್ ಅಂತ್ಯದೊಳಗಾಗಿ ಭೂ ಸುಧಾರಣಾ ಶಾಸನವನಉ ರಾಷ್ಟ್ರದಲ್ಲಿ ಎಲ್ಲ ರಾಜ್ಯಗಳಲ್ಲಿಯೂ ಜಾರಿಗೆ ತರುತ್ತೇವೆನ್ನುವ ಆಶ್ವಾಸನೆಯನ್ನು ಕೊಟ್ಟು ಅಧಿಕಾರಕ್ಕೆ ಬಂದ ಸರ್ಕಾರ ಆ ರೀತಿ ಮಾಡಲಿಲ್ಲ. ಆ ನಂತರ 1973ನೇ ಇಸವಿ ಅಕ್ಟೋಬರ್ ಎರಡನೇ ತಾರೀಖು ಗಾಂಧಿ ಜಯಂತಿಯ ದಿವಸ ಜಾರಿಗೆ ತರುತ್ತೇವೆಂದು ಶಾಸನ ಅಂಗೀಕಾರವಾದ ಮೇಲೆ ಮುಖ್ಯಮಂತ್ರಿಗಳು ಹೇಳಿದರು. ಆ ನಂತರ ನವೆಂಬರ್ ಒಂದನೇ ತಾರೀಖಿನಿಂದ ಜಾರಿಗೆ ತರುತ್ತೇವೆಂದು ಹೇಳಿದರು. ಈಗ 1974 ಮಾರ್ಚ್ ಒಂದನೇ ತಾರೀಖಿನ ಗೆಜೆಟ್ಟಿನಲ್ಲಿ ಪ್ರಕಟಿಸುವುದಾಗಿ ಹೇಳಿದ್ದಾರೆ. ಈ ರೀತಿ ವಿಳಂಬವಾಗುವುದಕ್ಕೆ ಕಾರಣಗಳೇನು ಎನ್ನುವುದಕ್ಕೆ ಸ್ಪಷ್ಟವಾದ ಉತ್ತರ ಕೊಡಬೇಕು. ಇದು ಬಹಳ ಮುಖ್ಯವಾದ ಶಾಸನ. ಇದರಲ್ಲಿರುವ ಎಲ್ಲ ಅಂಶಗಳನ್ನೂ ಪ್ರಾಮಾಣಿಕವಾದ ರೀತಿಯಲ್ಲಿ ಜಾರಿಗೆ ತರುವುದಾದರೆ ಖಂಡಿತವಾಗಿಯೂ ಹಳ್ಳಿಗಳಲ್ಲಿ ಕ್ರಾಂತಿಯಾಗಿ ಅದಕ್ಕೆ ಒಂದು ಆರಂಭದ ಹೆಜ್ಜೆಯನ್ನು ಇಟ್ಟಹಾಗಾಗುತ್ತದೆ. ಇಂಥ ಶಾಸನಕ್ಕೆ ಕೇಂದ್ರ ಸರ್ಕಾರದವರು ಏಕೆ ತಡೆ ಹಾಕಿದರು? ರಾಜ್ಯ ಸರ್ಕಾರದವರು ಇದನ್ನು ಸಕಾಲದಲ್ಲಿ ಜಾರಿಗೆ ತರುವುದಕ್ಕೆ ಏಕೆ ಪ್ರಯತ್ನ ಮಾಡಲಿಲ್ಲ ಎನ್ನುವುದಕ್ಕೆ ಉತ್ತರ ಕೊಡಬೇಕು.

ಒಂದೊಂದು ದಿವಸ ಶಾಸನವನ್ನು ಜಾರಿಗೆ ತರುವುದಕ್ಕೆ ತಡ ಮಾಡಿದ್ದರಿಂದ ಸಾವಿರಾರು ರೈತರು ಅವರ ಹಕ್ಕುಗಳನ್ನು ಕಳೆದುಕೊಂಡು ಈ ಹೊತ್ತು ಶಾಸನ ಜಾರಿಗೆ ಬರುವಂಥ ಅಧಿಕಾರ ಬಂದರೂ ಕೂಡ ಉಪಯೋಗವಿಲ್ಲದಂಥ ಪರಿಸ್ಥಿತಿ ನಮ್ಮ ರಾಜ್ಯದ ಅನೇಕ ಕಡೆಗಳಲ್ಲಿ, ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದೆ. ಭೂ ಸುಧಾರಣೆ ಶಾಸನ ಜಾರಿಗೆ ಬರುವಂಥ ಅಧಿಕಾರ ಬಂದರೂ ಕೂಡ ಉಪಯೋಗವಿಲ್ಲದಂಥ ಪರಿಸ್ಥಿತಿ ನಮ್ಮ ರಾಜ್ಯದ ಅನೇಕ ಕಡೆಗಳಲ್ಲಿ ಮುಖ್ಯವಾಗಿ ದಕ್ಷಿಣ ಕನ್ನಡ

ಜಿಲ್ಲೆಯಲ್ಲಿದೆ. ಭೂಸುಧಾರಣೆ ಶಾಸನವನ್ನು ತ್ವರಿತವಾಗಿ ಜಾರಿಗೆ ತರಬೇಕು ಎನ್ನುವುದಾದರೆ ನಾನು ಮೊದಲೇ ಹೇಳಿದ ಹಾಗೆ ಗ್ರಾಮಗಳಲ್ಲಿ ಸರಿಯಾದ ಆಡಳಿತ ವ್ಯವಸ್ಥೆಯನ್ನು ಮಾಡಬೇಕು. ಹೀಗೆ ಗೇಣಿದಾರರನ್ನು ಭೂಮಾಲೀಕರನ್ನಾಗಿ ಮಾಡುವಾಗ ಹಳ್ಳಿಗಳಲ್ಲಿರುವ ವ್ಯವಸಾಯ ಕೂಲಿಕಾರರಿಗೆ ರಕ್ಷಣೆ ಕೊಡಬೇಕು. ಮತ್ತು ಅವರು ಮಾಡುವ ಕೆಲಸಕ್ಕೆ ನ್ಯಾಯವಾದ ವೇತನ ಸಿಕ್ಕುವಂತೆ ವ್ಯವಸ್ಥೆ ಮಾಡಬೇಕು. ಅಲ್ಲದೆ ಅವರು ಎಷ್ಟು ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ, ಅವರ ಸರ್ವಿಸ್ಸಿಗೆ ಸರಿಯಾಗಿ ಸವಲತ್ತುಗಳು ಕೈಗಾರಿಕಾ ಕಾರ್ಮಿಕರಿಗೆ ಯಾವ ಸವಲತ್ತುಗಳು ಸಿಕ್ಕುತ್ತದೆಯೋ ಅದೇ ರೀತಿ ಸಿಕ್ಕುವಂಥ ವ್ಯವಸ್ಥೆಯನ್ನು ಇನ್ನೊಂದು ಕಾಯಿದೆಯ ಮೂಲಕ ಸರ್ಕಾರದವರು ಆದಷ್ಟು ಬೇಗನೆ ತರಬೇಕು. ಹಳ್ಳಿಗಳಲ್ಲಿರುವ ಹೆಂಡ ಇಳಿಸುವಂಥ ಜನರು ಕಂಟ್ರಾಕ್ಟರುದಾರರಿಂದ ಶೋಷಣೆಗೆ ಒಳಗಾಗಿ ಕಷ್ಟಪಡುತ್ತಿದ್ದಾರೆ. ಅವರನ್ನು ರಕ್ಷಣೆ ಮಾಡುವುದಕ್ಕೆ ಬೇಕಾದ ವ್ಯವಸ್ಥೆ, ಕನಿಷ್ಠ ವೇತನ ವ್ಯವಸ್ಥೆ ಮತ್ತು ಇತರ ಸವಲತ್ತುಗಳನ್ನು ಕೊಡುವಂಥ ಒಂದು ಶಾಸನವನ್ನು ಕೂಡ ಇದೇ ಶಾಸನ ಸಭೆಯಲ್ಲಿ ತರುವುದಕ್ಕೆ ಯೋಚನೆ ಮಾಡಬೇಕು. ಆವಾಗ ಸರ್ಕಾರದವರು ಒಂದು ರೀತಿಯ ಪಂಚಾಂಗವನ್ನು ಹಾಕಿದ ಹಾಗಾಗುತ್ತದೆಂದು ಹೇಳುತ್ತೇನೆ.



# 1952 ನೇ ಮೈಸೂರು ಗೇಣಿದಾರಿಯ ಅಧಿನಿಯಮ ಮೈಸೂರು

1952ನೇ ಇಸವಿಯ ಮೈಸೂರು ಗೇಣಿದಾರಿಯ ಅಧಿನಿಯಮವು ತೀರ್ಣವಾಗುವುದಕ್ಕಿಂತ ಪೂರ್ವದಲ್ಲಿ, ಗೇಣಿದಾರರ ಹಕ್ಕುಗಳು 1888ನೇ ಇಸವಿಯ ಮೈಸೂರು ಭೂಕಂದಾಯ ಕಾಯ್ದೆಯಿಂದ ನಿಯಮಿತಗೊಳಿಸಲ್ಪಟ್ಟಿದ್ದವು. ಈ ಕಾಯ್ದೆಯ ಪ್ರಕಾರ ಖಾಯಂ ಹಕ್ಕುಗಳಿದ್ದ ಗೇಣಿದಾರರ ಎರಡು ವರ್ಗಗಳಿದ್ದವು. ಅಂದರೆ ವರ್ಗಾಂತರಿತ ಭೂಮಿಗಳಲ್ಲಿ ಮಾತ್ರ ಕದೀಮ ಗೇಣಿದಾರರು ಮತ್ತು ವರ್ಗಾಂತರಿತ ಭೂಮಿಗಳು ಹಾಗೂ ವರ್ಗಾಂತರಿತವಲ್ಲದ ಭೂಮಿಗಳು(ಸರಕಾರೀ ಗ್ರಾಮಗಳು)ಇವೆರಡರ ಸಂಬಂಧದಲ್ಲಿ ಖಾಯಂ ಗೇಣಿದಾರರು.

ಕದೀಮ ಗೇಣಿದಾರರು ಅಂದರೆ ಭೂಕಂದಾಯವನ್ನು ಮಾತ್ರ ಕೊಡುವ ಗೇಣಿದಾರರು.

ಈ ಕೆಳಗಿನ ಗೇಣಿದಾರರು ಖಾಯಂ ಗೇಣಿದಾರರಾಗಿದ್ದಾರೆ.

೧. ಅನಾದಿಕಾಲದಿಂದ ಭೂಮಿಯನ್ನು ಧಾರಣಮಾಡುವವರು, ಅಥವಾ

೨. ೧೨ ವರ್ಷಗಳವರೆಗೆ ನಿಶ್ಚಿತ ಗೇಣಿಯ ಮೇಲೆ ನಿರಂತರ ಸ್ವಾಧೀನತೆಯಲ್ಲಿದ್ದ ಗೇಣಿದಾರರು, ಮತ್ತು ಗೇಣಿಯ ಸ್ವರೂಪ ಅಥವಾ ಅವಧಿಯ ಬಗ್ಗೆ ಕಂಟ್ರಾಕ್ಟು ಅಸ್ತಿತ್ವದಲ್ಲಿರಲಿಲ್ಲ

ಅಥವಾ

೩. ಭೂಮಾಲೀಕನಿಂದ ಅಥವಾ ನ್ಯಾಯಾಲಯದಿಂದ ಗೇಣಿದಾರರೆಂದು ಮಾನ್ಯಮಾಡಲ್ಪಟ್ಟವರು, ಅಥವಾ

೪. ಖಾಯಂ ಸುಧಾರಣೆಗಳನ್ನು ಮಾಡಿದಂಥವರು ಮತ್ತು ೧೨ ವರ್ಷಗವರೆಗೆ ನಿರಂತರ ಸ್ವಾಧೀನತೆಯಲ್ಲಿದ್ದವರು, ಅಥವಾ

೫. (ಭೂಒಡೆಯನು ನಿರಾಕರಿಸದಿದ್ದ)ವರ್ಗಾಯಿಸುವ ಹಕ್ಕನ್ನು ನಡೆಸಿದ್ದರು.

ಗೇಣಿದಾರರ ಈ ವಿಶಿಷ್ಟ ವರ್ಗಗಳನ್ನು ಬಿಟ್ಟರೆ ಉಳಿದ ಎಲ್ಲಗೇಣಿದಾರರುಇಚ್ಛಾವಲಂಬಿ ಗೇಣಿದಾರರಾಗಿದ್ದರು.

1952ನೇ ಇಸವಿಯ ಮೈಸೂರು ಗೇಣಿದಾರಿಯ ಅಧಿನಿಯಮವು ಮತ್ತು ಅದರನ್ವಯ ಮಾಡಲಾದ ನಿಯಮಗಳು ಕೆಲವೊಂದು ಗೇಣಿದಾರರಿಗೆ ಸ್ವಲ್ಪಮಟ್ಟಿಗೆ ಭದ್ರತೆಯನ್ನು ಒದಗಿಸಿಕೊಟ್ಟಿದ್ದವು

೧. ಅಧಿನಿಯಮವು ಪ್ರಾರಂಭವಾಗುವ ಕಾಲಕ್ಕೆ ಸ್ವಾಧೀನತೆಯಲ್ಲಿದ್ದ ಗೇಣೀದಾರರಿಗೆ ಅಧಿನಿಯಮವು ಪ್ರಾರಂಭವಾದಂದಿನಿಂದ ಐದು ವರ್ಷಗಳ ಹೆಚ್ಚಿನ ಅವಧಿಯನ್ನು ಕೊಡಲಾಗಿತ್ತು. ಮತ್ತು ಭೂ ಒಡೆಯನು ಅವರಿಗೆ ಮುಂದುವರೆಯಲಿಕ್ಕೆ ಅನುಮತಿಯನ್ನು ಕೊಟ್ಟ, ಹೊರ್ತು, ಈ ಅವಧಿಯು ಮುಕ್ತಾಯವಾದನಂತರ ತಳ್ಳಲ್ಪಡಲಿಕ್ಕೆ ಪಾತ್ರರಿದ್ದರು.

೨.1951ನೇ ಇಸವಿಯ ಏಪ್ರಿಲ್ ತಿಂಗಳ ೧ನೇಯ ದಿನಾಂಕಕ್ಕಿಂತ ಮುಂಚೆ ೧೨ ವರ್ಷಗಳಿಗೆ ಮೀರುವ ಅವಧಿಯವರೆಗೆ ನಿರಂತರ ಸ್ವಾಧೀನತೆಯಲ್ಲಿದ್ದಂಥ ಗೇಣೀದಾರರಿಗೆ ಇನ್ನೂ ಹೆಚ್ಚಿನ ೪. ವ್ಯವಸಾಯಕ್ಕಲ್ಲದೆ ಇತರ ಉದ್ದೇಶಗಳ ಸಲುವಾಗಿ ಭೂಮಿಯನ್ನು ಉಪಯೋಗಿಸುವುದು.

೫. ಗೇಣಿಯನ್ನು ಕೊಡಲಿಕ್ಕೆ ತಪ್ಪುವುದು.

೬. ಭೂಮಿಯು ನಾಶವಾಗುವಂಥ ಅಥವಾ ಅದಕ್ಕೆ ಕಾಯಂ ಆಗಿ ಧಕ್ಕೆ ತಟ್ಟುವಂಥ ರೀತಿಯಲ್ಲಿ ವರ್ತಿಸುವುದು.

ಪರಮಾವಧಿ ಕನಿಷ್ಟಮಿತಿಯ ಗೇಣಿಯು ಹುಟ್ಟುವಳಿಯ ಅಥವಾ ಅದರ ಬೆಲೆಯ ಅರ್ಧದಷ್ಟನ್ನು ಮೀರತಕ್ಕುದಾಗಿರಲಿಲ್ಲ.

1952ನೇ ಇಸವಿಯ ಈ ಅಧಿನಿಯಮವನ್ನು ಕೆಲವೇ ಆರಿಸಲಾದ ಕ್ಷೇತ್ರಗಳಲ್ಲಿ ಮೂಲತಃ ಜಾರಿಯಲ್ಲಿ ತರಲಾಯಿತು. ಮತ್ತು 1954ನೇ ಇಸವಿಯ ಜನವರಿ ತಿಂಗಳ ೧ನೇ ದಿನಾಂಕದಿಂದ ಬಳ್ಳಾರಿ ಜಿಲ್ಲೆಯನ್ನು ಬಿಟ್ಟು, ಇಡೀ ಮೈಸೂರು ರಾಜ್ಯಕ್ಕೆ ಅದನ್ನು ಅನ್ವಯಿಸಲಾಯಿತು.

1955ನೇ ಇಸವಿಯಲ್ಲಿ ಬಳ್ಳಾರಿ ಜಿಲ್ಲೆಗೂ ಸಹ ಈ ಅಧಿನಿಯಮವನ್ನು ಅನ್ವಯಿಸಲಾಯಿತು. ಪರಮಾವಧಿ ಗೇಣಿಯು ಅರ್ಧಕ್ಕಿಂತ ಹೆಚ್ಚಾಗಿರತಕ್ಕದ್ದಲ್ಲವೆಂದು ಮೂಲ ಅಧಿನಿಯಮವು ಪರಮಾವಧಿ ಗೇಣಿಯ ಕಡಿಮೆ ದರವನ್ನು ಗೊತ್ತು ಮಾಡಲಿಕ್ಕೆ ಪ್ರಯೋಗಿಸಿ ಸರ್ಕಾರದವರು 1955ನೇ ಇಸವಿ ಮಾರ್ಚ್ ತಿಂಗಳಲ್ಲಿ ಒಂದು ಅಧಿಸೂಚನೆಯನ್ನು ಹೊರಡಿಸಿ, ಮೈದಾನ ಕ್ಷೇತ್ರದಲ್ಲಿ ಹುಟ್ಟುವಳಿಯ ಒಂದು ಮೂರಾಂಶಕ್ಕೆ ಮತ್ತು ಮಲೆನಾಡು ಕ್ಷೇತ್ರದಲ್ಲಿ ಹುಟ್ಟುವಳಿಯ ಒಂದು ನಾಲ್ಕಾಂಶಕ್ಕೆ ಪರಾಕಾಷ್ಠ ಗೇಣಿಯನ್ನು ಗೊತ್ತು ಮಾಡಿದರು.

ಈ ಅಧಿನಿಯಮವನ್ನು ಸಹ 1957ನೇ ಇಸವಿಯ ಮಾರ್ಚಿ ತಿಂಗಳ ೧೧ನೇ ದಿನಾಂಕದ ಅಧ್ಯಾದೇಶದಿಂದ ತಿದ್ದಲಾಗಿತ್ತು. ಮತ್ತು ಈ ತಿದ್ದುಪಡಿಯ ಪ್ರಕಾರ ಐದು ವರ್ಷಗಳ ಅವಧಿಯು

ಮುಗಿದಂಥ ಎಲ್ಲ ಗುತ್ತಿಗೆಗಳನ್ನು ಮುಂದುವರೆಸಲಾಗಿತ್ತು. ಮತ್ತು ಭೂಮಿಯನ್ನು ಒಪ್ಪಿಸಿಕೊಡುವ ವಿಷಯವು ಬರಹ ರೂಪದಲ್ಲಿ ಇರತಕ್ಕದ್ದು ಮತ್ತು ಅವು ಸರಿಯಾಗಿ ಪ್ರಮಾಣೀಕರಿಸಲ್ಪಟ್ಟಿರತಕ್ಕದ್ದು ಮತ್ತು ಅಮಿಲದಾರನ ಕಚೇರಿಯಲ್ಲಿ ನೋಂದಾಯಿಸಲ್ಪಟ್ಟಿರತಕ್ಕದೆಂಬುದನ್ನು ಸಹ ಅವಶ್ಯಕಗೊಳಿಸಲಾಗಿತ್ತು. ಒಪ್ಪಿಸಿಕೊಡಲಾದ ಭೂಮಿಯನ್ನು ಸರ್ಕಾರದವರ ವ್ಯವಸ್ಥಾಪಕತ್ವದ ಕೆಳಗೆ ತೆಗೆದುಕೊಳ್ಳತಕ್ಕದ್ದಿತ್ತು. ಮತ್ತು ಕ್ರಮವಾಗಿ, ಸಹಕಾರೀ ಬೇಸಾಯ ಸಂಘಗಳು, ವ್ಯವಸಾಯದ ಕಾರ್ಮಿಕರು, ಭೂಮಿಹೀನ ಜನರು ಮತ್ತು ಇತರ ವ್ಯವಸಾಯಗಾರರು ಇವರಿಗೆ ಗುತ್ತಿಗೆ ಕೊಡಬೇಕಾಗಿದ್ದಿತು.

# ಮೈಸೂರು ಗೇಣೀದಾರಿಕೆಯ ಎಐರಡನೇ ತಿದ್ದುಪಡಿವಿ ವಿಧೇಯಕ 1954

ಹಿಂದಿನ ಮೈಸೂರು ರಾಜ್ಯ ಸರ್ಕಾರದವರು, 1952ನೇ ಇಸವಿಯ ಮೈಸೂರು ಗೇಣಿದಾರಿಕೆಯ ಅಧಿನಿಯಮವನ್ನು ತಿದ್ದುಪಾಟುಮಾಡುವ ವಿಧೇಯಕವನ್ನು ಕಾಯದೆ ಮಂಡಳದಲ್ಲಿ 1954ನೇ ಇಸವಿಯ ಅಕ್ಟೋಬರ್ ತಿಂಗಳಲ್ಲಿ ಮಂಡಿಸಿದರು. ಈ ವಿಧೇಯಕದ ಮುಖ್ಯಾಂಶಗಳು ಈ ಕೆಳಗಿನಂತಿದ್ದವು.

(1)1952ನೇ ಇಸವಿಯ ಅಧಿನಿಯಮದಲ್ಲಿದ್ದಂತೆ ಗೇಣೀದಾರರ ಎರಡು ಪ್ರಕಾರಗಳ ಬದಲಾಗಿ, ತಿದ್ದುಪಾಟಿನ ನಂತರ ಮೂರು ಪ್ರಕಾರಗಳಾಗುವವು ಅಂದರೆ

ಎ. ಸಂರಕ್ಷಿತ ಗೇಣಿದಾರರು:-ಸಂರಕ್ಷಿತ ಗೇಣಿದಾರರು ಅಂದರೆ 1951ನೇ ಇಸವಿಯ ಏಪ್ರಿಲ್ ತಿಂಗಳ ೧ನೇ ದಿನಾಂಕಕ್ಕಿಂತ ಮುಂಚೆ ಒಂಬತ್ತು ವರ್ಷಗಳಿಗಿಂತ ಕಡಿಮೆಯಲ್ಲದಷ್ಟು ಅವಧಿಯವರೆಗೆ ನಿರಂತರವಾಗಿ ಭೂಮಿಯನ್ನು ಧಾರಣ ಮಾಡಿದಂಥ ಮತ್ತು ಈ ಅವಧಿಯಲ್ಲಿ ಭೂಮಿಯನ್ನು ಸ್ವಂತ ಸಾಗುವಳಿ ಮಾಡಿದಂಥ ಗೇಣಿದಾರರು ಎಂದರ್ಥವಾಗುತ್ತಿದ್ದಿತು.

ಬಿ. ಸಂರಕ್ಷಿತವಲ್ಲದ ಗೇಣಿದಾರರು:-ಸಂರಕ್ಷಿತರಲ್ಲದ ಗೇಣಿದಾರರೆಂದರೆ ಐದು ವರ್ಷಗಳಿಗಿಂತ ಕಡಿಮೆಯಿಲ್ಲದ ಅವಧಿಯವರೆಗೆ ನಿರಂತರವಾಗಿ ಭೂಮಿಯನ್ನು ಧಾರಣಮಾಡಿದಂಥ ಗೇಣಿದಾರರೆಂದು ಅರ್ಥವಾಗುತ್ತಿದ್ದಿತು.

ಸಿ. ಸಾಮಾನ್ಯ ಗೇಣಿದಾರರು.

೨. ಗೇಣಿದಾರರ ಬೇರೆ ಬೇರೆ ವರ್ಗಗಳ ಹಕ್ಕುಗಳು:-ಗೇಣಿದಾರರು ಒಳವಿಭಜನೆಯ ಕಾರಣದ ಮೇಲೆ ಹೊರತಳ್ಳಲ್ಪಡಲಿಕ್ಕೆ ಪಾತ್ರರಿರುವುದಿಲ್ಲೆಂಬ ಸಂಗತಿಯನ್ನು ಹೊರ್ತುಪಡಿಸಿ ಹೊರತಳ್ಳಲ್ಪಡಲಿಕ್ಕೆ ಇರಬೇಕಾದ ಸಾಮಾನ್ಯ ಕಾರಣಗಳು ಬದಲಾಗದೆ ಉಳಿದವು.

೩. ಸಂರಕ್ಷಿತ ಗೇಣಿದಾರರು:-ಭೂ ಒಡೆಯನಿಗೆ ಭೂಮಿಯು ಈ ಕೆಳಗೆ ಹೇಳಲಾದ ಕಾರಣಗಳ ಸಲುವಾಗಿ ನಿಜವಾಗಿಯೇ ಬೇಕಾಗಿತ್ತೆಂಬ ಕಾರಣದ ಮೇಲೆ , ಸಂರಕ್ಷಿತ ಗೇಣೀದಾರರು ತಳ್ಳಿ ಹಾಕಲ್ಪಡಲಿಕ್ಕೆ ಪಾತ್ರರಿದ್ದರು.

೧. ಸ್ವಂತ ಸಾಗುವಳಿಯ ಸಲುವಾಗಿ, ಅಥವಾ

೨. ಧಾರಣಮಾಡಲ್ಪಡಬಹುದಾದ ಹಿಡುವಳಿಯ ಒಂದು ನಾಲ್ಕಾಂಶದವರೆಗೆ ವ್ಯವಸಾಯದ್ದಲ್ಲದ ಉಪಯೋಗದ ಸಲುವಾಗಿ, ಧಾರಣ ಮಾಡಲ್ಪಡಬಹುದಾದ ಹಿಡುವಳಿಯು ೨೫ ಪ್ರಮಾಣಭೂತ ಎಕರೆಗಳಿಗೆ ಸಮವಾಗಿದ್ದಿತು. ಭೂ ಒಡೆಯನು ಭೂಮಿಯನ್ನು ತನ್ನ ವತಿಯಿಂದ ಮತ್ತು ತನ್ನ ಕುಟುಂಬದ ಇತರ ಸದಸ್ಯರ ವತಿಯಿಂದ ಧಾರಣಮಾಡಿದ್ದಾಗ್ಯೆ, ಧಾರಣಮಾಡಲ್ಪಡಬಹುದಾದ ಹಿಡುವಳಿಯು ಪರಮಾವಧಿ ೧೦೦ ಪ್ರಮಾಣಭೂತ ಎಕರೆಗಳಿಗೊಳಪಟ್ಟು, ತನ್ನ ಕುಟುಂಬದ ಪ್ರತಿಯೊಬ್ಬ ಸದಸ್ಯನ ಬಗ್ಗೆ ೨೫ ಪ್ರಮಾಣ ಭೂತ ಎಕರೆಗಳಾಗುವುದು.

ಸಂರಕ್ಷಿತ ಗೇಣಿದಾರರಿಂದ ಭೂ ಒಡೆಯನು ತಿರುಗಿ ಪಡೆಯಲಿಕ್ಕೆ ಸಾಧ್ಯವಿರುವ ಕ್ಷೇತ್ರರನಉ ನಿರ್ಧರಿಸುವಾಗ, ಈಗಾಗಲೇ ತನ್ನಿಂದ ಸ್ವಂತ ಸಾಗುವಳಿ ಮಾಡಲಾದ ಅಥವಾ ಸಂರಕ್ಷಿತ ಗೇಣಿದಾರನಲ್ಲದ ಇತರ ಗೇಣೀದಾರರನಿಗೆ ಗುತ್ತಿಗೆ ಕೊಡಲಾದ ಕ್ಷೇತ್ರವನ್ನು ಲೆಕ್ಕದಲ್ಲಿ ತೆಗೆದುಕೊಳ್ಳತಕ್ಕದ್ದು. ಮೇಲಾಗಿ ಇಂಥ ಭೂಮಿಯ ಸಾಗುವಳಿಯಿಂದ ಬಂದ ಉತ್ಪನ್ನವು ಭೂ ಒಡೆಯನಿಗೆ ತನ್ನ ಉಪಜೀವನದ ಸಲುವಾಗಿ ಉತ್ಪನ್ನದ ಮುಖ್ಯ ಸಾಧನವಾಗಿರತಕ್ಕದ್ದು. ಆದರೆ ಈ ತುರ್ತು ವ್ಯವಸಾಯದ್ದಲ್ಲದ ಉಪಯೋಗದ ಸಾಧನವಾಗಿರತಕ್ಕದ್ದು. ಆದರೆ ಈ ಶರ್ತು ವ್ಯವಸಾಯದ್ದಲ್ಲದ ಉಪಯೋಗದ ಸಲುವಾಗಿ ತಿರುಗಿ ಪಡೆದ ಭೂಮಿಗಳಿಗೆ ಅನ್ವಯಿಸುತ್ತಿದ್ದಿಲ್ಲ.

೪.ಸಂರಕ್ಷಿತರಲ್ಲದ ಗೇಣೀದಾರರು:- ಒಂದು ಧಾರಣಮಾಡಲ್ಪಡಬಹುದಾದಷ್ಟು ಹಿಡುವಳಿಯವರೆಗೆ ಸ್ವಂತ ಸಾಗುವಳಿಯ ಸಲುವಾಗಿ ಭೂಮಿಯು ಭೂ ಒಡೆಯನಿಗೆ ಬೇಕಾಗಿರುವ ಕಾರಣದ ಮೇಲಿಂದ ಸಂರಕ್ಷಿತರಲ್ಲದ ಗೇಣೀದಾರರನ್ನು ಒಂದು ವರ್ಷದ ನೋಟೀಸು ಕೊಟ್ಟು, ತಳ್ಳಿಹಾಕಬಹುದು. ತನ್ನ ಉಪ ಜೀವನ ಸಲುವಾಗಿ ತನ್ನ ಉತ್ಪನ್ನದ ಮುಖ್ಯ ಸಾಧನವಾಗಿರುವ ಕಾರಣದ ಮೇಲೆ ಭೂ ಒಡೆಯನಿಗೆ ಭೂಮಿಯು ಬೇಕಾಗಿರುವುದೆಂಬ ಶರ್ತು ಈ ಸಂದರ್ಭದಲ್ಲಿ ಸಹ ಅನ್ವಯಿಸಿತು. ಭೂಒಡೆಯನು ಎರಡು ವರ್ಷಗಳೊಳಗೆ ಭೂಮಿಯನ್ನು ಸ್ವಂತ ಸಾಗುವಳಿಮಾಡದಿದ್ದರೆ ತಳ್ಳಿಹಾಕಲ್ಪಟ್ಟ, ಗೇಣಿದಾರನಿಗೆ ಭೂಮಿಯನ್ನು ತಿರುಗಿ ಪಡೆಯಲಿಕ್ಕೆ ಹಕ್ಕಿದ್ದಿತು.

೫. ಸಾಮಾನ್ಯ ಗೇಣಿದಾರರು:-ಇತರ ಎಲ್ಲ ಗೇಣಿದಾರರಿಗೆ ಅಧಿನಿಯಮದಲ್ಲಿದ್ದಂತೆ ಐದು ವರ್ಷಗಳ ಬದಲಾಗಿ ಹತ್ತು ವರ್ಷಗಳ ಕನಿಷ್ಠ ಅವಧಿಯ ಕೊಡಲಾಗಿದ್ದಿತು. ಮತ್ತು ಅವಧಿಯ ಕೊನೆಗೆ ಅವರು ತಳ್ಳಿಹಾಕಲ್ಪಡಲಿಕ್ಕೆ ಪಾತ್ರರಿದ್ದರು. ಆದರೆ, ಭೂ ಒಡೆಯನು ಅವರಿಗೆ ಧಾರಣಮಾಡಿ ಮುಂದುವರೆಯಲಿಕ್ಕೆ ಅನುಮತಿ ಇತ್ತರೆ, ಅವರ ಅವಧಿಯ ಮತ್ತೆ ಹತ್ತು ವರ್ಷಗಳವರೆಗೆ ಬೆಳೆಯುವುದು. ಅಸಂರಕ್ಷಿತ ಗೇಣಿದಾರರ ಸಂಬಂದಲ್ಲಿದ್ದಂತೆಯೇ ಭೂ ಒಡೆಯನಿಗಿದ್ದ ತಿರುಗಿ ಪಡೆಯುವ ಹಕ್ಕನ್ನು ನಡೆಸಿ ಒಂದು ವರ್ಷದ ಸೂಚನೆ ಯನ್ನು ಕೊಟ್ಟು ಅವರ ಸಹ ತಳ್ಳಿಹಾಕಲ್ಪಡಲಿಕ್ಕೆ ಪಾತ್ರರಿದ್ದರು.

೬. ಕೊಳ್ಳುವ ಹಕ್ಕು:-ಸಂರಕ್ಷಿತ ಗೇಣಿದಾರರು ಮತ್ತು ಸಂರಕ್ಷಿತರಲ್ಲದ ಗೇಣಿದಾರರು (ಆದರೆ ಸಾಮಾನ್ಯ ಗೇಣಿದಾರರಲ್ಲ),ಮೊತ್ತದ ಮೊಬಲಗಿನಲ್ಲಿ ಅಥವಾ ಆರಕ್ಕೆ ಮೀರದ ಕಂತುಗಳಲ್ಲಿ ಮತ್ತು ಹತ್ತು ವರ್ಷಗಳಿಗೆ ಮೀರದಂತೆ ವಿಸ್ತೃತವಾದ ಅವಧಿಯವರೆಗೆ ಪೇಟೆಯ ಬೆಲೆಯನ್ನು ಕೊಟ್ಟು, ಭೂಒಡೆಯನ ಹಕ್ಕುಗಳನ್ನು ಕೊಂಡುಕೊಳ್ಳಲಿಕ್ಕೆ ಬಾಧ್ಯಸ್ಥರಿದ್ದರು. ಕೊಂಡುಕೊಳ್ಳುವ ಹಕ್ಕು ಎರಡು ಶರ್ತುಗಳಿಗೆ ಒಳಪಟ್ಟಿದ್ದಿತು. ಅಂದರೆ

ಎ. ಗೇಣಿದಾರನು ಕೊಳ್ಳಬಹುದಾದ ಒಟ್ಟು ಭೂಮಿಯು (ಒಡೆಯನೆಂದು ತನ್ನ ಸ್ವಾದೀನದಲ್ಲಿದ್ದ ಭೂಮಿಯನ್ನು ಹಿಡಿದು)೨೫ ಪ್ರಮಾಣಭೂತ ಎಕರೆಗಳಾಗಿದ್ದಿತು. ಮತ್ತು.

ಬಿ. ಖರೀದಿಯ ನಂತರ ಭೂ ಒಡೆಯನ ಹತ್ತಿರ ಉಳಿದ ಒಟ್ಟು ಕ್ಷೇತ್ರವು ಧಾರಣ ಮಾಡಲ್ಪಡಬಹುದಾದ ಹಿಡುವಳಿಗಿಂತ (ಅಂದರೆ ೨೫ ಪ್ರಮಾಣಭೂತ ಎಕರೆಗಳಿಂದ ೧೦೦ ಎಕರೆಗಳ ವರೆಗೆ)ಕಡಿಮೆಯಾಗಿರತಕ್ಕದ್ದಲ್ಲ.

ಸಂರಕ್ಷಿತ ಗೇಣೀದಾರನಿಂದ ಅಥವಾ ಸಂರಕ್ಷಿತನಲ್ಲದ ಗೇಣೀದಾರಿಂದ ಖರೀದಿಯಾದನಂತರ, ಗೇಣಿದಾರನಿಗೆ ಮಾರಾಟ , ದಾನ ಮುಂತಾದವುಗಳ ಮೂಲಕ ಭೂಮಿಯನ್ನು ವರ್ಗಾಯಿಸಲಿಕ್ಕೆ ಹಕ್ಕು ಇರಲಿಲ್ಲ.

೭. ಪರಮಾವಧಿ ಗೇಣಿ:-1952ನೇ ಇಸವಿಯ ಅಧಿನಿಯಮದ ಪ್ರಕಾರ, ಪರಮಾವಧಿ ಗೇಣಿಯು, ಭೂಮಿಯಲ್ಲಿ ಬೆಳೆದ ಎಲ್ಲ ಬೆಳೆಗಳ ಅರ್ಧದಷ್ಟಿದ್ದಿತು. ತಿದ್ದುಪಾಟಿನ ಪ್ರಕಾರ, ಭೂಮಿಯನ್ನು ಬೆಳೆದ ಮುಖ್ಯ ಬೆಳೆಯ ಅಥವಾ ಬೆಲೆಯ ಅರ್ಧದಷ್ಟನ್ನು ಮೀರತಕ್ಕದ್ದಾಗಿರಲಿಲ್ಲ.

೮. ಇತರ ಬದಲಾವಣೆಗಳು

ಎ. ನ್ಯಾಯವಾದ ಗೇಣಿ ನಿರ್ಣಯಮಾಡಲು ಗೇಣೀದಾರನು ಬೇಕಾದಾಗ ಅರ್ಜಿ ಹಾಕಬಹುದಾಗಿತ್ತು. ಆದರೆ ತಿದ್ದುಪಡಿಯ ಅಧಿನಿಯಮದ ಮೇರೆಗೆ, ಸದ್ಯ ಒಂದು ಸಮಯ ಪರಿಮಿತಿಯನ್ನು ಗೊತ್ತುಪಡಿಸುವುದು ಅಗತ್ಯವಾದುದಾಗಿತ್ತು. ಈ ಅಧಿನಿಯಮದನ್ವಯ ಒಂದು ಸಲ

ಗೊತ್ತು ಪಡಿಸಿದ ನ್ಯಾಯವಾದ ಗೇಣಿ ಆ ಗೇಣಿದಾರಿ ಮುಗಿಯುವವರೆಗೆ ಪ್ರಚಲಿತವಿರುತ್ತಿತ್ತು. ತಿದ್ದುಪಡಿಯ ಅಧಿನಿಯಮದ ಮೇರೆಗೆ ಐದು ವರುಷಗಳ ಅನಂತರ ಅದರಲ್ಲಿ ಹೆಚ್ಚು ಕಡಿಮೆ ಮಾಡಿಕೊಳ್ಳಲು ಬರುವಂತಿದೆ.

ಬಿ. ಇರಲು ಮನೆ ಕಟ್ಟಿಕೊಂಡಿರುವಸ್ಥಳದ ಒಡೆಯನು ಆ ಮನೆ ಕಟ್ಟಿರುವ ತನ್ನ ಸ್ಥಳವನ್ನು ಮಾರುವ ಉದ್ದೇಶವುಳ್ಳನಾದರೆ, ಆಸ್ಥಳದಲ್ಲಿ ಮನೆ ಕಟ್ಟಿಕೊಂಡಿರುವ ಗೇಣಿದಾರನು ಆ ಸ್ಥಳವನ್ನು ತಾನು ಕೊಳ್ಳಲು ಇಚ್ಛೆಯುಳ್ಳವನಾಗಿರುವನೇ ಎಂಬುದನ್ನು ತಿಳಿದುಕೊಳ್ಳಲು ಆ ಒಡೆಯನು ಅವನಿಗೆ ನೋಟೀಸು ಕೊಡತಕ್ಕದು. ಗೇಣೀದಾರನು ಮೂರು ತಿಂಗಳ ಅವಧಿಯೊಳಗಾಗಿ ಆ ನೋಟೀಸಿಗೆ ಉತ್ತರಕೊಡತಕ್ಕುದು. ತಿದ್ದುಪಡಿಯ (ಅಧಿನಿಯಮ)ಮೇರೆಗೆ ಈ ಅವಧಿಯನ್ನು ಒಂದು ತಿಂಗಳಿಗೆ ಇಳಿಸಲಾಗಿದೆ.

ಅಧಿನಿಯಮದ ಮೇರೆಗೆ ಭೂಮಿಯ ಒಡೆಯನು ಹಾಕುವ ಶರ್ತುಗಳನ್ನು ಪೂರೈಸಿಯೇ ಗೇಣಿದಾರನು ಆ ಭೂಮಿಯನ್ನು ಕೊಳ್ಳಬಹುದಾಗಿದೆ. ಆದರೆ ಅವನು ತಿದ್ದುಪಡಿಯನ್ವಯ ಭೂಮಿಯ ಪೇಟೆ ಬೆಲೆಯ ನಿರ್ಣಯ ಮಾಡಲು ಕಂದಾಯ ನ್ಯಾಯಾಲಯಕ್ಕೆ ಅರ್ಜಿ ಹಾಕಿಕೊಳ್ಳಬಹುದು.

ಸಿ. ಭೂಮಿಯ ಒಡೆಯನು ಗೇಣೀದಾರನಿಗೆ ಗೇಣಿಗೆ ಕೊಟ್ಟಿರುವ ಭೂಮಿಯನ್ನು ಮಾರುವ ಇಚ್ಛೆಮಾಡಿದರೂ ಗೇಣಿದಾರನಿಗೆ ಅದೇ ಬಗೆಯ ನೋಟೀಸಲು ಕೊಡತಕ್ಕದ್ದು. ಭೂಮಿಯ ಬೆಲೆಯನನು ಭೂಮಿಯ ಒಡೆಯನೇ ನಿರ್ಣಯಿಸತಕ್ಕದ್ದು. ತಿದ್ದುಪಡಿಯ ಮಸೂದೆಯ ಮೇರೆಗೆ ಗೇಣಿದಾರನು ಹಿಡುವಳಿಯನ್ನು ಖರೀದಿಮಾಡುವ ಇಷ್ಟವುಳ್ಳನಾಗಿದ್ದು ಭೂಮಿಯ ಒಡೆಯನು ಕೇಳುವ ಬೆಲೆ ಕೊಡಲು ಸಿದ್ಧನಿರದಿದ್ದರೆ, ಆ ಭೂಮಿ ಪೇಟೆ ಬೆಲೆಯನ್ನು ನಿರ್ಣಯಿಸಲು ಅವನು ಅಸಿಸ್ಟೆಂಟ ಕಮಿಷನರಲ್ಲಿ ಅರ್ಜಿಹಾಕಿಕೊಳ್ಳಬಹುದು. ಹಾಗೆ ಗೊತ್ತುಪಟ್ಟ ಪೇಟೆ ಬೆಲೆಯನ್ನು ಅಧಿನಿಯಮದಲ್ಲಿ ಹೇಳಿರುವ ಒಂದುತಿಂಗಳಿಗೆ ಬದಲಾಗಿ ಮೂರು ತಿಂಗಳ ಅವಧಿಯಲ್ಲಿ ಅವನು ಸಲ್ಲಿಸಬಹುದು.

ಡಿ. ಅಧಿನಿಯಮದ ಮೇರೆಗೆ ಗೇಣಿದಾರನು ಲೇಖಿಯಲ್ಲಿ ಕೇಳಿಕೊಂಡರೆ ಮಾತ್ರ ಗೇಣಿ ಹಣದ ಬಗ್ಗೆ ಭೂಮಿಯ ಒಡೆಯನು ಪಾವತಿ(ರಶೀದಿ)ಕೊಡುವಂತೆ ಉಪಬಂಧವಿದೆ. ಆದರೆ ತಿದ್ದುಪಡಿಯ ಅಧಿನಿಯಮದ ಮೇರೆಗೆ ಎಲ್ಲ ಪ್ರಸಂಗಗಳಲ್ಲಿಯೂ ಅವನು ಪಾವತಿ ಕೊಡತಕ್ಕುದಾಗಿದೆ. ಪಾವತಿಯ ರೀತಿ ಕ್ರಮ ನಮೂನೆಗಳನ್ನು ಅಧಿನಿಯಮದ ಮೇರೆಗೆ ಗೊತ್ತುಪಡಿಸಬೇಕಾಗಿತ್ತು. ಆದರೆ ತಿದ್ದುಪಡಿಯ (ಅಧಿನಿಯಮದ ಮೇರೆಗೆ)ಭೂಮಿಯ ಒಡೆಯನು ತನಗೆ ಸಂಬಂಧ ರೀತಿಯಲ್ಲಿ ಪಾವತಿ (ರಶೀದಿ)ಕೊಡಬಹುದಾಗಿದೆ.

ಇ. ರಕ್ಷಿತ ಗೇಣಿದಾರನ ಹಿತವು ಒಂದು ನಿರ್ಬಂಧಿತ ಕೋಷ್ಟಕಾನುಸಾರ ಅನುವಂಶಿಕವಾಗಿ ಮುಂದುವರಿಯುವಂತೆ ಮಾಡಲಾಗಿದೆ.

ಎಫ್. ರಕ್ಷಿತ ಗೇಣಿದಾರನು ಭೂಮಿಯಲ್ಲಿ ತಾನು ಮಾಡಿರುವ ಸುಧಾರಣೆಗಳ ಬಗ್ಗೆ ಪರಿಹಾರ ಹೊಂದಲು ಬಾಧ್ಯನಿರುವನು.

ಜಿ. ತಿದ್ದುಪಡಿಯ ಅಧಿನಿಯಮವು ಆಚರಣೆಯಲ್ಲಿ ಬಂದನಂತರ ಭೂಮಿಯ ಒಡೆಯನು ಮಾಡಿರುವ ಹಸ್ತಾಂತರಗಳಿಂದ ತತ್ಸಂಬಂಧದ ಭೂಮಿಗಳನ್ನು ಅದರ ರಕ್ಷಿತ ಗೇಣಿದಾರನು ಅಥವಾ ಅರಕ್ಷಿತ ಗೇಣಿದಾರನು ಕೊಂಡುಕೊಳ್ಳುವ ಅವನ ಅಧಿಕಾರಕ್ಕಾಗಲೀ ಅಥವಾ ಸ್ವಂತ ಸಾಗುವಳಿ ಮಾಡಲು ಭೂಮಿಯ ಒಡೆಯನು ಗೇಣೀದಾರಿಯನ್ನು ಮುಕ್ತಾಯಗೊಳಿಸುವ ಅವನ ಅಧಿಕಾರಕ್ಕಾಗಲೀ ಯಾವ ಬಾಧೆ ಬರುವುದಿಲ್ಲ.

ತಿದ್ದುಪಡಿಯ ಮಸೂದೆಯು, ರಾಜ್ಯ ಪುನರ್ವಿಂಗಡನೆಯಾಗುವ ಸಮಯಕ್ಕೆ, ಶಾಸನರೂಪ ತಾಳುವ ಎಲ್ಲಅಗತ್ಯವಾದ ಹಂತಗಳನ್ನು ದಾಟಿರಲಿಲ್ಲ.



# ಗೇಣಿದಾರೀ ಶಾಸನದ ರಚನೆ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳು

ಶ್ರೀ ಬಿ.ಡಿ.ಜತ್ತಿಯವರು ಇದರ ಅಧ್ಯಕ್ಷರಾಗಿದ್ದರು.

**ಸದಸ್ಯರುಗಳಾಗಿ**

| | |
|---|---|
| ಎಂ.ಆರ್.ಪಾಟೀಲರು, | ಸದಸ್ಯರು |
| ಬಿ.ವಿ.ದೇಸಾಯಿಯವರು, | ಸದಸ್ಯರು |
| ಎನ್.ಹುಚ್ಚಮಾಸ್ತಿಗೌಡರು, | ಸದಸ್ಯರು |
| ಮಲ್ಲಿಕಾರ್ಜುನಪ್ಪಗೌಡರು, | ಸದಸ್ಯರು |
| ಬಿ.ಬಸವಲಿಂಗಪ್ಪನವರು, | ಸದಸ್ಯರು |
| ಸಿ.ಎ.ಮಂದಣ್ಣನವರು, | ಸದಸ್ಯರು |
| ಬಿ.ಆರ್.ಕರ್ಕೇರರು, | ಸದಸ್ಯರು |
| ಕೆ.ಬಾಲಸುಬ್ರಮಣ್ಯಂರವರು, | ಸದಸ್ಯರು |
| ವಿ.ಎಸ್.ಹಿರೇಮಠರವರು, | ಸದಸ್ಯರು |

ಶ್ರೀ ಕೆ.ಬಾಲಸುಬ್ರಣ್ಯಂ ಇವರು ಸದರಿ ಸಮಿತಿಯ ಸದಸ್ಯ ಕಾರ್ಯದರ್ಶಿಗಳಾಗಿದ್ದರು.

# ಜತ್ತಿ ಸಮಿತಿ 1957

## ಭೂಗೇಣಿ ಪದ್ಧತಿಯ ಸಮೀಕ್ಷೆ ನಡೆಸಿ ಈ ಕೆಳಕಂಡ ಅಂಶಗಳಿಗೆ ಸೂಕ್ತ ಕ್ರಮ ಹಾಗೂ ಪರಿಹಾರವನ್ನು ಸಮಿತಿ ಸೂಚಿಸಬೇಕಿತ್ತು.

**1.**ಗೇಣಿದಾರರಿಗೆ ಭೂಮಿಯ ಒಡೆತನ ಕ್ರಮಬದ್ಧಗೊಳಿಸುವಿಕೆ.

**2.**ಕುಟುಂಬಗಳಿಗೆ ಸಂಖ್ಯಾಧಾರಿತ ಭೂ ಹಿಡುವಳಿಯ ಒಡೆತನ.

**3.**ಜಮೀನು ಕಳೆದುಕೊಂಡ ಜಮೀನ್ದಾರರಿಗೆ ನಿಗಧಿಗೊಳಿಸಬಹುದಾದ ಪರಿಹಾರ.

**4.**ಕೃಷಿಯೇತರರಿಂದ ಕೃಷಿ ಭೂಮಿಯ ವಶ ಇತ್ಯಾದಿ.

## ಸಮಿತಿಯು ಶಿಫಾರಸ್ಸು ಮಾಡಿದ ಅಂಶಗಳು ಈ ಕೆಳಕಂಡಂತಿವೆ.

**1.**ಗುತ್ತಿಗೆಯ ಪದ್ಧತಿ ನಿಷೇಧ.

**2.**ಸ್ವಂತವಾಗಿ ಬೇಸಾಯ ಮಾಡುವವನಿಗೆ ಭೂಮಿ ನೀಡಿಕೆ.

**3.**ಜಮೀನ್ದಾರಿ ಮತ್ತು ಗೇಣಿ ಪದ್ಧತಿಯನ್ನು ರದ್ದುಗೊಳಿಸುವುದು.

**4.**ಜಮೀನ್ದಾರರರು ಸ್ವಂತ ಸಾಗುವಳಿ ಮಾಡಬಹುದಾದಷ್ಟು ಭೂಮಿಯನ್ನು ಮಾತ್ರ ವಾಪಸ್ ಪಡೆಯಲು ಅರ್ಹರಷ್ಟೇ ವಿನಃ ಪೂರ್ಣ ಹಿಡುವಳಿಗಳನ್ನೆಲ್ಲ ಗಳಿಸಿಕೊಳ್ಳುವಂತಿಲ್ಲ.

ಈ ಸಮಿತಿಯು 1958ರಲ್ಲಿ ತನ್ನ ವರದಿಯನ್ನು ವಿಧಾನಸಭೆಯಲ್ಲಿಸದಸ್ಯರ ಅಭಿಪ್ರಾಯಕ್ಕೆ ಮಂಡಿಸಿತು. ಈ ಸಮಿತಿಯ ವರದಿಯ ಚರ್ಚಿಸಿದ ಸಭೆ ಅಂತಿಮ ನಿರ್ಣಯಕ್ಕೆ ಮುನ್ನ ಎರಡು ಸದನಗಳ 44ಮಂದಿ ಸದಸ್ಯರನ್ನೊಳಗೊಂಡ ಆಯ್ಕೆಸಮಿತಿಯ ಅಭಿಪ್ರಾಯಕ್ಕಾಗಿ ಒಪ್ಪಿಸಿತು. ನಂತರದಲ್ಲಿ ದೀರ್ಘವಾಗಿ ಚರ್ಚೆಗೊಂಡು 1961ರ ಮಾರ್ಚಿಯಲ್ಲಿ ಸರಕಾರಕ್ಕೆ ವರದಿಯನ್ನು ಸಲ್ಲಿಸಿತು.

# 1961 ರ ಕಾಯ್ದೆಯ ತಿದ್ದುಪಡಿ ಸಮಿತಿ

ಭೂಸುಧಾರಣಾ ತಿದ್ದುಪಡಿಗಾಗಿ 1961ರ ಕಾಯ್ದೆಯನ್ನು ಅಧ್ಯಯನ ಮಾಡಿ ಸೂಕ್ತ ತಿದ್ದುಪಡಿಗಳನ್ನು ಸೂಚಿಸಲು ಮುಖ್ಯಮಂತ್ರಿಗಳಾಗಿದ್ದ ಡಿ.ದೇವರಾಜ ಅರಸು ಅವರು ಜಾಯಿಂಟ್ ಸೆಲೆಕ್ಟ್ ಕಮಿಯನಲು ರೂಪಿಸಿದ್ದರು. ಆಗಿನ ಕಂದಾಯ ಸಚಿವರಾಗಿದ್ದ

**ಸಮಿತಿಯ ಅಧ್ಯಕ್ಷರು ಹಾಗೂ ಪದಾಧಿಕಾರಿಗಳ ವಿವರ ಇಂತಿದೆ.**

ಅಧ್ಯಕ್ಷತೆ
ಎಸ್.ಹುಚ್ಚಮಾಸ್ತಿಗೌಡರು,

**ಸದಸ್ಯರುಗಳಾದ**

| | |
|---|---|
| ಶ್ರೀ ಕಾಗೋಡು ತಿಮ್ಮಪ್ಪ | ಸದಸ್ಯರು |
| ಕಲ್ಮಣ್ಕರ್, | ಸದಸ್ಯರು |
| ಸುಬ್ಬಯ್ಯಶೆಟ್ಟಿ, | ಸದಸ್ಯರು |
| ಪಿ.ಸಿ.ಶೆಟ್ಟರ್, | ಸದಸ್ಯರು |
| ಎ.ಎ.ದೇಸಾಯಿ , | ಸದಸ್ಯರು |
| ಕಾನೂನು ಸಚಿವರಾದ ಡಿ.ಕೆ.ನಾಯ್ಕರ್, | ಸದಸ್ಯರು |

ಕಾನೂನು ಕಾರ್ಯದರ್ಶಿ ಎಸ್.ಡಿ.ವೆಂಕಟೇಶ್ ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನವು ಈ ಸಮಿತಿಯಲ್ಲಿತ್ತು.

# 1961 ರ ಭೂ ಸುಧಾರಣಾ ಪ್ರಮುಖಾಂಶಗಳು

**1961ಸೆಲೆಕ್ಟ್ ಕಮಿಟಿಯುವರು 1957ರ ಕಮಿಟಿಯ ವರದಿ ಅಲ್ಪ ಬದಲಾವಣೆಯನ್ನು ಒಳಗೊಂಡು ವಿಧಾನಸಭೆಯಲ್ಲಿ ಮಂಡಿಸಿತು. ಅದರ ಪ್ರಮುಖಾಂಶವನ್ನು ಇಲ್ಲಿ ನೀಡಲಾಗಿದೆ.**

1. ಗೇಣಿದಾರರು ನೀಡಬೇಕಾದ ಗೇಣಿಯ ಪ್ರಮಾಣದಲ್ಲಿ ಯಾವ ಬದಲಾವಣೆಯ ಸೂಚನೆಯೂ ಇಲ್ಲ.
2. ಯಾವುದೇ ಸಂಸ್ಥೆಗಳು ಭೂಮಿಯನ್ನು ಪಡೆಯುವಂತಿಲ್ಲ.
3. ಒಂದು ಕುಟುಂಬಕ್ಕೆ ಭೂ ಪರಿಮಿತಿ27 ಪ್ರಮಾಣಿತ ಎಕರೆಗಳಿಗೆ ( ಉತ್ಕೃಷ್ಟ:Stander acre)ಸೀಮಿತವಾಗಿರತಕ್ಕದ್ದು. ಐದು ಮಂದಿ ಇರುವ ಕುಟುಂಬ 216 ಎಕರೆಯ ವರೆಗೆ ಒಣ ಭೂಮಿಯನ್ನು ಹೊಂದಬಹುದು.
4. ಸ್ವಂತ ವ್ಯವಸಾಯಕ್ಕಾಗಿ ಮಾತ್ರ ಜಮೀನನ್ನು ಸ್ವಾಧೀನ ಪಡೆಯಬಹುದು.
5. ಜಮೀನುಗಳಿಂದ ಗೇಣಿದಾರರನ್ನು ಭೂಮಾಲೀಕರು ಒಕ್ಕಲೆಬ್ಬಿಸಬೇಕಾದರೆ ಒಂದು ವರ್ಷದೊಳಗೆ ತಕರಾರು ಅರ್ಜಿ ಸಲ್ಲಿಸುವುದು.
6. ಪ್ಲಾಂಟೇಷನ್‌ಗಳ ಪರಮಾವಧಿ ಮಿತಿ ನೂರು ಎಕರೆಗಳು.
7. ಗೇಣಿ ಜಮೀನು ಕೊಡುವ ಪದ್ಧತಿ ನಿಷೇಧ.
8. ಗೇಣಿ ಜಮೀನಿನ ಸ್ವಾಮ್ಯವನ್ನು ಮೊದಲು ಸರಕಾರ ಪಡೆದು ಆನಂತರ ಸಂಬಂಧಿಸಿದ ಗೇಣಿದಾರನಿಗೆ ಅದರ ಒಡೆತನವನ್ನು ನೀಡುವುದು.
9. ಭೂ ಸುಧಾರಣೆಯಿಂದ ಭೂಮಿಯನ್ನು ಕಳೆದುಕೊಂಡವರಿಗೆ ಹತ್ತು ಸಾವಿರ ರೂ.ಗಳವರೆಗೆ ಒಂದೇ ಕಂತಿನಲ್ಲಿ ಪರಿಹಾರ ನೀಡಲು ಅವಕಾಶ.
10. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ನ್ಯಾಯಾದೀಶರು ಭೂಪಂಚಾಯ್ತಿಗಳನ್ನು ರೂಪಿಸುವುದು. ಭೂಪಂಚಾಯ್ತಿಗಳ ಮುಂದೆ ವಕೀಲರು ಹಾಜರಾಗಲು ಅವಕಾಶ.

ಈ ಸಮಿತಿಯ ತನ್ನ ವರದಿಯಲ್ಲಿ ತಿಳಿಸಿದ ಪ್ರಕಾರ ಈ ಕೆಳಕಂಡವರಿಗೆ ಅನ್ವಯಿಸುವುದಿಲ್ಲ. ಅಪ್ರಾಪ್ತ ವಯಸ್ಕರು,ಸಣ್ಣ ಭೂಹಿಡುವಳಿದಾರರು, ವಿವಾಹವಾಗದ ಹೆಣ್ಣುಮಕ್ಕಳು, ವಿಧವೆಯರು, ಬುದ್ಧಿಮಾಂಧ್ಯರು ಅಥವಾ ಅಂಗವಿಕಲರು, ಮಿಲಿಟರಿ ಹಾಗೂ ವಾಣಿಜ್ಯ ನೌಕೆಗಳಲ್ಲಿ ಸೇವೆ ಸಲ್ಲಿಸುವವರು.

## 1974 ರ ಭೂ ಸುಧಾರಣಾ ತಿದ್ದುಪಡಿಯ ಪ್ರಮುಖಾಂಶಗಳು

1961ರಲ್ಲಿ ರಚಿತವಾಗಿದ್ದ ಸಮಿತಿಯ ಕಾಯ್ದೆಯನ್ನು ಪುನರ್ ಪರಿಶೀಲಿಸಿ ಕೆಲವು ತಿದ್ದುಪಾಟು ಮಾಡಿ1973ರಲ್ಲಿ ಶಾಸನಸಭೆಯಲ್ಲಿ ಮಂಡಿಸಿತು.
ಇದಾದ ನಂತರದಲ್ಲಿ ರಾಷ್ಟ್ರಪತಿಯವರ ಒಪ್ಪಿಗೆಗಾಗಿ ಕಳುಹಿಸಿಕೊಡಲಾಯಿತು. ಈ ಕಾಯ್ದೆ ರಾಷ್ಟ್ರಪತಿಯವರ ಒಪ್ಪಿತವನ್ನು ಪಡೆಯಿತು.
1974ರಲ್ಲಿ ಜಾರಿಗೊಳ್ಳಲು ಅನುವಾಯಿತು. ಈ ಕಾಯ್ದೆ ಪ್ರಮುಖಾಂಶಗಳನ್ನು ಇಲ್ಲಿ ನೀಡಲಾಗಿದೆ.

1. ಗೇಣಿಗೊಳಗಾಗಿದ್ದ ಭೂಮಿಯನ್ನು ಎ,ಬಿ,ಸಿ, ಮತ್ತು ಡಿ ಎಂದು ವರ್ಗೀಕರಿಸಲಾಯಿತು. ಗೇಣಿದಾರ ಇವುಗಳ ಮಾಲೀಕತ್ವ ಅಥವಾ ಒಡೆತನ ಪಡೆದುಕೊಳ್ಳಲು ಎ,ಬಿ,ಸಿ, ವರ್ಗದ ಜಮೀನಿನ ನಿವ್ವಳ ವಾರ್ಷಿಕ ಆದಾಯದ 15ಪಟ್ಟನ್ನೂ ಡಿ. ವರ್ಗದ ಭೂಮಿಗೆ20 ಪಟ್ಟನ್ನೂ ಸರಕಾರಕ್ಕೆ ಇಪ್ಪತ್ತು ವರ್ಷಗಳ ಕಂತಿನಲ್ಲಿ ಪಾವತಿಸಬೇಕು. ಪೂರ್ಣ ಮೊತ್ತ ಪಾವತಿಯಾದ ನಂತರವೇ ಜಮೀನಿನ ಒಡೆತನ ಗೇಣಿದಾರನಿಗೆ ದೊರೆಯುವಂತಹುದು.

2. ಭೂ ನ್ಯಾಯಮಂಡಳಿಗಳ ತೀರ್ಮಾನವನ್ನು ಯಾವ ನ್ಯಾಯಾಲಯಗಳಲ್ಲೂ ಪ್ರಶ್ನಿಸುವಂತಿಲ್ಲ. ಆದರೆ ತೀರ್ಪು ಒಪ್ಪಿಗೆಯಾಗದಿದ್ದಲ್ಲಿ ಹೈಕೋರ್ಟಿನಲ್ಲಿ ರಿಟ್ ಹಾಕಬಹುದು.

3. ಕೃಷಿಯೇತರ ವೃತ್ತಿ ಅಥವಾ ಮೂಲಗಳಿಂದ ವಾರ್ಷಿಕ ರೂ, 12,000ಗಳಿಗಿಂತ ಹೆಚ್ಚು ವರಮಾನ ಪಡೆಯುವವರು ಕೃಷಿ ಭೂಮಿಯನ್ನು ಖರೀದಿಸುವ ಹಕ್ಕಿಲ್ಲ. ನಂತರ ಅದನ್ನು 5,000ರೂ.ಗಳ ವರಮಾನಕ್ಕೆ ಮಿತಿಗೊಳಿಸಲಾಯಿತು.

4. ಭೂಮಿಯ ವರ್ಗೀಕರಣವನ್ನು ಅನುಸರಿಸಿ ಭೂಮಿತಿ ಹೇರಲಾಗಿದೆ. ಎ ವರ್ಗದ ಭೂಮಿಯಾದರೆ 10ಎಕರೆಯನ್ನೂ, ಬಿ. ವರ್ಗದ ಭೂಮಿಯಾದರೆ 20ಎಕರೆಗಳನ್ನು ಸಿ ಮತ್ತು ಡಿ. ವರ್ಗದ ಭೂಮಿಯಾದರೆ 40ಎಕರೆಗಳಷ್ಟು ಭೂ ಒಡೆತನ ಹೊಂದಿರಬಹುದು.

5. ಕಾಫಿ, ಟೀ, ರಬ್ಬರ್ ಮೊದಲಾದ ಪ್ಲಾಂಟೇಶನ್ ಭೂಮಿಗೆ ಭೂಪರಿಮಿತಿ ಅನ್ವಯವಾಗುವುದಿಲ್ಲ.

# ಕಾಗೋಡು ಚಳವಳಿಯಲ್ಲಿ

# ರೈತ ಸಂಘದ ಪಾತ್ರ

# ಕಾಗೋಡು ಚಳವಳಿಯಲ್ಲಿ
# ಸಾಗರ ತಾಲ್ಲೂಕ್ ರೈತ ಸಂಘದ ಪಾತ್ರ

ಸಾಗರ ತಾಲ್ಲೂಕಿನ ಗೇಣಿರೈತರ ಸ್ಥಿತಿಗತಿ ಉತ್ತಮವಾಗಿರಲಿಲ್ಲ. ಭೂಮಾಲೀಕರನ್ನು ಯಾರೂ ಪ್ರಶ್ನಿಸುವ ಧೈರ್ಯವನ್ನು ಮಾಡಿರಲಿಲ್ಲ. ತಮಗಾಗುತ್ತಿದ್ದ ಅನ್ಯಾಯಗಳನ್ನು ಕಣ್ಣಾರೆ ನೋಡುತ್ತ ಸುಮ್ಮನೆ ಕೂರುವಂತೆ ಸ್ಥಿತಿಯಿತ್ತು. ಗೇಣಿ ರೈತರು ಒಮ್ಮೆಲೆ ಸ್ಫೋಟಿಸಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು.

ಭೂಮಾಲೀಕ ಶೋಷಣೆ ಮತ್ತು ಅನ್ಯಾಯಗಳನ್ನು ನಿವಾರಿಸಿಕೊಳ್ಳಲು,ರೈತರ ದುಃಖ ದಮ್ಮಾನಗಳನ್ನು ಅರಿಯಲು ಒಂದು ವೇದಿಕೆ ಸಿದ್ಧವಾಗಬೇಕಾಗಿತ್ತು.ಇದಕ್ಕಾಗಿ ದಿನಾಂಕ 4.1.1948ರಲ್ಲಿ ಸಾಗರ ತಾಲೂಕಿನ ಮುರತ್ತೂರಿನ ಗ್ರಾಮದಲ್ಲಿ ಬೃಹತ್ ರೈತರ ಸಮಾವೇಶ ನಡೆಸಲಾಯಿತು. ಈ ಸನ್ನಿವೇಶದಲ್ಲಿ ಸಾಗರ ತಾಲ್ಲೂಕ್ ರೈತ ಸಂಘವು ಅಸ್ತಿತ್ವಕ್ಕೆ ಬಂದಿತು. ಅಧ್ಯಕ್ಷರಾಗಿ ಡಿ.ಮೂಕಪ್ಪನವರು, ಕಾರ್ಯದರ್ಶಿಯಾಗಿ ಎಚ್.ಗಣಪತಿಯಪ್ಪನವರು, ಉಳಿದ ಹದಿನೈದು ಮಂದಿ ಸದಸ್ಯರನ್ನೊಳಗೊಂಡ ರೈತ ಸಂಘವು ಅಸ್ತಿತ್ವಕ್ಕೆ ಬಂದಿತು.

ರೈತ ಸಂಘವು ತಕ್ಷಣವೇ ಕಾರ್ಯಾಚರಣೆ ಕೈಗೊಂಡು ಪ್ರತಿ ಗ್ರಾಮಗಳಿಗೂ ಎಡತಾಕಿ ಅಲ್ಲಿ ರೈತರ ಸಭೆಯನ್ನು ನಡೆಸಿ ಅವರ ರೈತ ಸಂಘ ಧ್ಯೇಯ ಉದ್ದೇಶಗಳನ್ನು ವಿವರಿಸಿ ಹೇಳುವುದು ಸಂಘ ಕೆಲಸವಾಗಿತ್ತು.

ಈ ಹಿನ್ನೆಲೆಯಲ್ಲಿ ರೈತ ಸಂಘವು ಭೂಮಾಲೀಕರ ಶೋಷಣೆಯ ವಿರುದ್ಧ ಕೆಲವು ಬೇಡಿಕೆಯನ್ನಿಟ್ಟು, ಪ್ರತಿರೋಧ ಒಡ್ಡುತ್ತಿದ್ದರು ಅವುಗಳೆಂದರೆ.

ಭೂಮಾಲೀಕರು ಮೂರು ಸೇರಿನ ಕೊಳಗದಲ್ಲಿಯೇ ಗೇಣಿಯನ್ನು ಪಡೆಯಬೇಕು. ಅಲ್ಲದೆ ಹೆಚ್ಚಿನ ಭತ್ತ, ಸಲಿಗೆ ಬತ್ತ ವಗೈರೆ ಎಂದು ಚೀಲಕ್ಕೆ ಎರಡು ಮೂರು ಸೇರು ಹೆಚ್ಚಾಗಿ ಪಡೆಯುವುದು ನಿಲ್ಲಬೇಕು.

ಭೂಮಿಯನ್ನು ಗೇಣಿಗೆ ಕೊಟ್ಟಿದ್ದೇವೆಂದೂ, ಅಥವಾ ಗೇಣಿ ಪಡೆದಿದ್ದೇವೆಂದೂ ಒಪ್ಪಂದದ ಕರಾರಿನಂತೆ ಬರೆದು ಕೊಟ್ಟು, ಗೇಣಿ ಪಡೆದಿದ್ದಕ್ಕೆ ರಶೀದಿ ಕೊಡಬೇಕು.

ವರ್ಷಕ್ಕೆ ನಾಲ್ಕರಿಂದ ಹತ್ತು ಆಳುಗಳು ಒಡೆಯರ ಬಿಟ್ಟಿ ಕೆಲಸ ದುಡಿತವನ್ನು ರದ್ದು ಪಡಿಸಬೇಕು.

ಅತಿವೃಷ್ಟಿ ಅನಾವೃಷ್ಟಿಗಳಿಂದ ಬೆಳೆ ನಷ್ಟವಾದಾಗ ಗೇಣಿಯನ್ನು ಪಡೆಯಬಾರದು.

ಇದಲ್ಲದೆ ಸರ್ಕಾರದ ಮುಂದೆಯೂ ಸಹ ರೈತ ಸಂಘ ಬೇಡಿಕೆಯನ್ನು ಮಂಡಿಸಿತು

ಗೇಣಿದಾರರ ಭೂಮಿಯನ್ನು ಭೂಮಾಲಿಕರು ಕೈ ತಪ್ಪಿಸದಂತೆ ತಕ್ಷಣವೇ ಆರ್ಡಿನೆನ್ಸ್ ಹೊರಡಿಸಬೇಕು. ಅಲ್ಲದೆ ಗೇಣಿದಾರರ ರಕ್ಷಣೆ ನೀಡುವ ಟೆನನ್ಸಿ ಕಾನೂನು ಜಾರಿಗೆ ತರಬೇಕು.

ಸರ್ಕಾರವು ರೈತರಿಗೆ ರಿಯಾಯ್ತಿಗಳನ್ನು ಘೋಷಿಸಿದಾಗಲೆಲ್ಲ ಕೇವಲ ಕಂದಾಯ ಕೊಡುವವರನ್ನೇ ರೈತರೆಂದು ಪರಿಗಣಿಸುತ್ತಿದೆ. ಇನ್ನು ಮುಂದೆ ಗೇಣಿದಾರರೂ ರೈತರೆಂದು ಪರಿಗಣಿಸಿ ಅವರಿಗೆ ಸರ್ಕಾರದ ರಿಯಾಯ್ತಿ ಸೌಲಭ್ಯಗಳನ್ನು ಒದಗಿಸಬೇಕು. ಉದಾಹರಣೆಗೆ, ಬೆಳೆ ರಕ್ಷಣೆಗೆ ಬಂದೂಕು ಲೈಸನ್ಸ್, ನಾಟಾ ರಿಯಾಯ್ತಿದರ, ಬೆಳೆಸಾಲ, ಅಭಿವೃದ್ಧಿ ಸಾಲ ಇತ್ಯಾದಿ. ಇಂತಹ ಬೇಡಿಕೆಗಳನ್ನು ಪ್ರತಿಹಳ್ಳಿಯಲ್ಲೂ ರೈತರ ಮುಂದೆ ಮಂಡಿಸಲಾಯಿತು.

ಇದನ್ನು ಗಮನಿಸಿದ ಭೂಮಾಲೀಕರು ಸಾಗರ ತಾಲೂಕ್ ಭೂಹಿಡುವಳಿದಾರರ ಸಂಘವನ್ನು ಸ್ಥಾಪಿಸಿದರು. ರೈತ ಸಂಘದ ಕಾರ್ಯಕ್ರಮಗಳನ್ನು ವಿಫಲಗೊಳಿಸಲು ಯತ್ನಿಸಲಾಯಿತು.ಆದರೆ ಅವರ ಯತ್ನ ಫಲಕಾರಿಯಾಗಲಿಲ್ಲ.



# ರೈತ ಸಂಘ ರೂಪಿಸಿದ ಸಭೆ ಸಮಾರಂಭದ ಯಥಾವತ್ತಾದ ದಾಖಲುಗಳು

## ರೈತ ಸಂಘ, ಸಾಗರ

ತಾರೀಖು 11.1.1951ನೇ ದಿನ ಸಾಗರ ಟೌನ್ ಗಾಂಧಿ ಮೈದಾನದಲ್ಲಿ
ಶ್ರೀಮಾನ್ ನಗರದ ಸಿ.ಕೃಷ್ಣಮೂರ್ತಿರಾವ್, ಬಿ.ಎ.,ಎಲ್.ಎಲ್.ಬಿ.,ವಕೀಲರು,

**ಇವರ ಘನ ಅಧ್ಯಕ್ಷತೆಯಲ್ಲಿ ಸೇರಿದ ರೈತರ ಮಹಾಸಭೆಯಲ್ಲಿ ಒಮ್ಮತದಿಂದ ತೀರ್ಮಾನವಾದ ನಿರ್ಣಯಗಳು**

೧.ಮಲೆನಾಡು ರೈತರು ಸಂಘಟಿತರಾಗಿ ತಮ್ಮ ನ್ಯಾಯವಾದ ಬೇಡಿಕೆಗಳನ್ನು ಯೋಗ್ಯ ಮತ್ತು ಸಂಪೂರ್ಣ ಶಾಂತ ಉಪಾಯಗಳಿಂದ ಸಾಧಿಸಿಕೊಳ್ಳಬೇಕೆಂದು ಈ ಸಭೆಯು ತೀರ್ಮಾನಿಸುತ್ತದೆ.

೨.ಮಲೆನಾಡು ರೈತರ ಸದ್ಯದ ಗಂಭೀರ ಪರಿಸ್ಥಿತಿಯನ್ನು ಗಮನಿಸಿ ಸರ್ಕಾರದವರು ಶೀಘ್ರವಾಗಿ ಗೇಣಿದಾರರ ಹಿತರಕ್ಷಣೆ ಕಾನೂನನ್ನು ಟೆನೆನ್ಸಿ ಬಿಲ್ ಋಣ ವಿಮೋಚನೆ ಕಾನೂನನ್ನು ಜಾರಿಗೆ ತರಬೇಕೆಂದೂ, ರೈತರಿಗೆ ಹಕ್ಕಿನ ಮೇಲೆ ತಕಾವಿ ಸಾಲವನ್ನು ಕೊಡಿಸುವ ವ್ಯವಸ್ಥೆಯನ್ನೂ ಮಾಡಬೇಕಲ್ಲದೆ ಜಮೀನು ದರಖಾಸ್ತು, ಕೊಟ್ಟ ಎರಡು ತಿಂಗಳೊಳಗಾಗಿ ಜಮೀನು ದೊರಕುವಂತೆ ಮಾಡಬೇಕಾಗಿಯೂ ಈ ಸಭೆಯು ಸರ್ಕಾರವನ್ನು ಒತ್ತಾಯ ಪಡಿಸುತ್ತದೆ.

೩. ಸರ್ಕಾರವು ಟೆನೆನ್ಸಿ, ಬಿಲ್ ಜಾರಿಗೆ ತರುವವರೆಗೆ ಪರಸ್ಪರ ಒಪ್ಪಿಗೆ ಇಲ್ಲದೆ ಗೇಣಿದಾರರಿಂದ ಜಮೀನು ಪಬಿಡಿಸಬಾರದಾಗಿಯೂ, ಕಂಟ್ರೋಲ್ ಬಂದ ಮೇಲೆ ಏರಿಸಿದ ಮತ್ತು ಹಣದ ಗೇಣಿ ಇದ್ದುದ್ದನ್ನು ಭತ್ತದ ಗೇಣಿಗೆ ಬದಲಾಯಿಸಿದ್ದರಿಂದ ರೈತನಿಗಾದ ನಷ್ಟವನ್ನು ಸರಿಪಡಿಸಬೇಕಾಗಿಯೂ, ಕ್ಷೇತ್ರ ವಿಸ್ತೀರ್ಣಕ್ಕನುಗುಣವಾಗಿ ಎಕರೆ ಗುಂಟೆಗಳ ಲೆಖ್ಖ ಹಿಡಿದು ಗೇಣಿಯಲ್ಲಿ ಸೂಕ್ತ ರಿಯಾಯ್ತಿ ಮಾಡಬೇಕಾಗಿಯೂ, ಜಮೀನು ಸಾಗುವಳಿ ಉತ್ತಮಪಡಿಸಲು ಹೆಚ್ಚಿನ ಕಾಮಗಾರಿಗಳನ್ನು ಮಾಡುವಾಗ ಸಹಾಯವನ್ನು ನೀಡಬೇಕಾಗಿಯೂ, ತೆಗೆದುಕೊಂಡ ಗೇಣಿಗೆ ಕ್ರಮವಾದ ರಸೀತಿಯನ್ನು ಕೊಡಬೇಕಾಗಿಯೂ ಈ ಸಭೆಯು ಜಮೀನ್ದಾರರನ್ನು ಪ್ರಾರ್ಥಿಸುತ್ತದೆ.

೪. ಈಹಿಂದೆ ಅನೇಕ ಬಾರಿ ಸ್ಪಷ್ಟಪಡಿಸಿರುವಂತೆ ಗೇಣಿ ಭತ್ತದ ಅಳತೆಯು ೬೦ ಸೇರಿನ ಖಂಡ್ಗಕ್ಕೆ ಮೀರದಂತೆಯೂ, ೬೦ ಸೇರಿನ ಖಂಡ್ಗದ ಅಳತೆಗಿಂತ ಕಡಿಮೆ ಇರುವ ಪ್ರದೇಶದಲ್ಲಿ ೫೦ಸೇರಿನ ಖಂಡ್ಗಕ್ಕೆ ಮೀರದ ಅಳತೆಯಲ್ಲೂ ಗೇಣಿ ತೆಗೆದುಕೊಳ್ಳಬೇಕಾಗಿ ಈ ಸಭೆಯು ಜಮೀನ್ದಾರರನ್ನು ಪ್ರಾರ್ಥಿಸುತ್ತದೆ.

**ಸೂಚಕರು:ಡಿ.ಮೂಕಪ್ಪನವರು**

**ಅನುಮೋದಕರು:ಎಚ್.ಗಣಪತಿಯಪ್ಪನವರು.**

**ಗಜಾನನ ಪ್ರೆಸ್, ಸಾಗರ.**



### ದಿನಾಂಕ 17.4.1951ನೇ ದಿನ

## ಸಾಗರ ಪಟ್ಟಣದ ಗಾಂದೀಮ್ಯೆದಾನದಲ್ಲಿ ಸೇರಿದ ಸಾಗರ ತಾಲೂಕು ರೈತರ ಬಹಿರಂಗ ಸಭೆಯಲ್ಲಿ ತೀರ್ಮಾನವಾದ ನಿರ್ಣಯಗಳು

### ನಿರ್ಣಯ

"ತಾಲೂಕಿನ ಕೆಲವು ಗ್ರಾಮಗಳಲ್ಲಿ ಜಮೀನ್ದಾರರು ಗೇಣಿದಾರರ ವ್ಯವಸಾಯದ ಕೆಲಸಕ್ಕೆ ಅಡ್ಡಿ ಪಡಿಸುತ್ತಿದ್ದಾರೆ. ಬಿತ್ತನೆ ಕಾಲ ಸಮೀಪಿಸಿರುವುದರಿಂದ ಪರಿಸ್ಥಿತಿ ಹೀಗೆಯೇ ಉಳಿದರೆ ಜಮೀನುಗಳೆಲ್ಲಾ ಬೀಳು ಬಿದ್ದು ನೂರಾರು ರೈತ ಕುಟುಂಬಗಳಿಗೆ ಉದ್ಯೋಗತಪ್ಪಿ ಮುಂದಿನ ವರ್ಷಕ್ಕೆ ಅನ್ನವಿಲ್ಲದಂತಾಗುವುದು.

ಕಾನೂನು, ನ್ಯಾಯ ,ನೀತಿಗಳನ್ನು ಮೀರಿ ರೈತರ ವ್ಯವಸಾಯ ಕೆಲಸ ಅಡ್ಡಿಪಡಿಸುತ್ತಿರುವ ಜಮೀನ್ದಾರರ ನಡವಳಿಕೆಗಳನ್ನು ಈ ಸಂಘವು ಖಂಡಿಸುತ್ತದೆ. ಅಲ್ಲದೆ ದಿನಾಂಕ18.4.1951ನೇ ಬುಧವಾರದಿಂದ ಪ್ರತಿ ದಿನ ಬೆಳಿಗ್ಗೆ 9ಗಂಟೆಯಿಂದ12ಗಂಟೆಯವರೆಗೆ ಕಾಗೋಡು ರೈತರಿಗೆ ಅಡ್ಡಿಪಡಿಸುತ್ತಿರುವ ಜಮೀನಿನಲ್ಲಿ ಸಾಮೂಹಿಕವಾಗಿ ಶಾಂತರೀತಿಯಿಂದ ಪ್ರವೇಶಿಸುವ ಮೂಲಕ ಅಹಿಂಸಾತ್ಮಕ ರೀತಿಯಲ್ಲಿ ಸತ್ಯಾಗ್ರಹವನ್ನು ನಡೆಯಿಸಬೇಕೆಂದು ಈ ಸಭೆಯು ಒಮ್ಮತದಿಂದ ತೀರ್ಮಾನಿಸುತ್ತದೆ."

ಸಹಿ

ಹೆಚ್.ಗಣಪತಿಯಪ್ಪ

ಸಭಾಧ್ಯಕ್ಷರು.

೧೫.೧೧.೧೯೫೦ರಲ್ಲಿ ಸಾಗರ ತಾಲೂಕಿನಲ್ಲಿ,ದಿನಾಂಕ ೧೬.೧೧.೧೯೫೦ ರಂದು ತಾಳಗುಪ್ಪದಲ್ಲಿ,೮.೧೨.೧೯೫೦ರಂದು ಸಿರಿವಂತೆಯಲ್ಲಿ,೧೭.೧೨.೧೯೫೦ರಂದು ತ್ಯಾಗರ್ತಿಯಲ್ಲಿ , ೫.೧.೧೯೫೧ರಂದು ಕಾನಲೆಯಲ್ಲಿ,೭.೧.೧೯೫೧ರಂದು ಉಳುಮೆಯಲ್ಲಿ,೯.೧.೧೯೫೧ರಂದು ಮಡಸಾರಿನಲ್ಲಿ, ೧೧.೧.೧೯೫೧ರಂದು ಸಾಗರದಲ್ಲಿ ,೧೪.೧.೧೯೫೧ರಂದು ಆನಂದಪುರದಲ್ಲಿ,೧೭.೧.೧೯೫೧ರಂದು ಬಂಕಸಾಣ, ಸೊರಬತಾಲ್ಲೂಕಿನ ಕರೂರಿನಲ್ಲಿ, ೨೦.೧.೧೯೫೧ರಂದು ಸಾಗರ ತಾಲ್ಲೂಕಿನ ಹಿರೇನಲ್ಲೂರಿನಲ್ಲಿ,೨೬.೩.೧೯೫೧ರಂದು ತಾಳಗುಪ್ಪದಲ್ಲಿ ಸಮಾಜವಾದಿ ಪಕ್ಷದ ನೇತಾರ ಶಾಂತವೇರಿ ಗೋಪಾಲ ಗೌಡರು ರೈತಸಭೆಯಲ್ಲಿ ಭಾಗವಹಿಸಿದ್ದರು.

## ರೈತ ಸಂಘದ ಅಧ್ಯಕ್ಷ ಡಿ.ಮೂಕಪ್ಪನವರು ಮಾಡಿದ ಬಾಷಣವನ್ನು ಪ್ರಜಾವಾಣಿ ಪತ್ರಿಕೆಯಲ್ಲಿ ವರದಿ ಮಾಡಿದ ಭಾಗವನ್ನು ಇಲ್ಲಿ ನೀಡಲಾಗಿದೆ.

ರೈತರಿಗೂ ಜಮೀನುದಾರರಿಗೂ ಮಧುರಬಾಂಧವ್ಯ ಇದೆಯೆಂದೂ, ಪರಿಸ್ಥಿತಿ ಕೆಟ್ಟಿಲ್ಲವೆಂದೂ ಹೇಳುತ್ತಾ, ಶ್ರೀ ಒಡೆಯರ್‌ರವರು ಅನೇಕ ವರ್ಷಗಳಿಂದ ನಡೆಯಿಸಿಕೊಂಡು ಬಂದ ರೈತರನ್ನು ಈಗ ಹೋಗಿ ಎಂದರೆ, ಎಲ್ಲಿಗೆ ಹೋಗಬೇಕು?ಎಂಬುದಾಗಿ ಪ್ರಶ್ನಿಸಿದ್ದಾರೆ. ಅಕ್ರಮವಾಗಿ ಕಾನೂನಿಗೆ ವಿರುದ್ಧವಾಗಿ ಬಲತ್ಕಾರದಿಂದ ಈಗ ರೈತರನ್ನು ಬಿಡಿಸುತ್ತಿರುವವರೇ ಈ ಪ್ರಶ್ನೆಗೆ ಉತ್ತರ ಹೇಳಬೇಕು. ಎಲ್ಲಿ ಹೋಗಬೇಕು?ಈಗ ಏಕೆ ರೈತರನ್ನು ಬಿಡಿಸಬೇಕು?ಎಂಬ ಪ್ರಶ್ನೆಯನ್ನೇ ರೈತರು ಕೇಳುತ್ತಿದ್ದಾರೆ. ಈವರೆಗೆ ಈ ಪ್ರಶ್ನೆಗೆ ಯಾರೂ ಉತ್ತರ ಕೊಟ್ಟಿಲ್ಲಾ. ಇದು ತುಂಬಾ ವಿಸ್ಮಯಕರವಾಗಿದೆ.

ದೊಡ್ಡ ತತ್ವಗಳನ್ನು ಇತರರಿಗೆ ಧಾರಾಳವಾಗಿ ಉಪದೇಶ ಮಾಡಬಹುದು. ತಾವು ಆಚರಿಸುರುದು ಮಾತ್ರ ಕಷ್ಟ. ಕೊಟ್ಟಿದ್ದು ತೆಗೆದುಕೊಳ್ಳಿ ಎಂದು ಗೇಣಿದಾರರು ಹೇಳಿದರೆ ತಪ್ಪು. ಆದರೆ ಕೇಳಿದಷ್ಟು ಕೊಡಬೇಕೆಂದು ಹಿಡುವಳಿದಾರರು ಬಲಾತ್ಕರಿಸಿದರೆ ತಪ್ಪಲ್ಲ!

ಕೆಲವ ಕಡೆ ಜಮೀನುದಾರರು ಕಡ್ಡಾಯವಾಗಿ ಮಾಡಿಸುತ್ತಿದ್ದ, ಮನುಷ್ಯತ್ವಕ್ಕೆ ಹೀನವಾದ ಬಿಟ್ಟಿ ಕೆಲಸದ ಪದ್ಧತಿಯನ್ನೂ, ಜೀತದ ಪದ್ಧತಿಯನ್ನೂ ಅನೇಕ ಮಾಮೂಲುಗಳ ಹೆಸರಿನ ಸುಲಿಗೆಯನ್ನು ಅಕ್ರಮವಾದ ಅಳತೆ ತೂಕದ ಬಹಿರಂಗ ಮೋಸದ ಪದ್ಧತಿಯನ್ನೂ, ರೈತರು ಸಂಘಟಿತರಾಗಿ ಇನ್ನು ಸಹಿಸಬಾರದೆಂದು ನಿರ್ಧರಿಸಿರುವುದರಿಂದ, ಕೆಲವು ಜಮೀನುದಾರರು ರೈತರ ಮೇಲೆ ಅಪಪ್ರಚಾರಕ್ಕೆ ತೊಡಗಿರುವುದು ತೀರಾ ಖಂಡನೀಯ.

ರೈತ ಸಂಘ ಸ್ಥಾಪಿಸಿದರೂ ಕಾಂಗ್ರೆಸ್ಸಿಗರೇ ಗೇಣಿ ವಿಚಾರದಲ್ಲಿ ನ್ಯಾಯವಾದ ಬೇಡಿಕೆಗಳಿಗೆ ಸಮ್ಮತಿಸಿ ಎಷ್ಟೋ ಮಂದಿ ಜಮೀನ್ದಾರರು ಅದರಂತೆ ನಡೆದುಕೊಂಡಿದ್ದಾರೆ. ಕಾಗೋಡಿನ ಸುತ್ತಮುತ್ತಲ ಕೆಲ ಗ್ರಾಮಗಳಲ್ಲಿ ಮಾತ್ರ ಈಗೊಂದಲವಾಗಿದೆ.

ಅನೇಕ ವರ್ಷಗಳಿಂದ ಕೆಲವು ಜಮೀನುದಾರರ ಶೋಷಣೆಗೆ ಒಳಗಾಗಿದ್ದ ರೈತರು, ತಮಗೆ ನ್ಯಾಯ ದೊರಬೇಕೆಂದೂ, ಕಾನೂನಿನ ರಕ್ಷಣೆ ಬೇಕೆಂದೂ, ಕೇಳುತ್ತಿರುವುದನ್ನು `ಚಳವಳಿ'ಎಂದು ಹೇಳಿ ಉತ್ಪ್ರೇಕ್ಷೆ ಮಾಡುವುದು. ಮಾನ್ಯ ಮಿತ್ರರೂ, ಹಿರಿಯರೂ ಮೇಲಾಗಿ ಮುಖಂಡರೂ ಆದ ಶ್ರೀ ಒಡೆಯರಂತಹವರಿಗೆ ಭೂಷಣವಲ್ಲ. ನ್ಯಾಯಬದ್ಧವಲ್ಲ.

ನ್ಯಾಯವಾಗಿ, ಧರ್ಮಕ್ಕೆ ಅನುಸಾರವಾಗಿ ಹಾಗೂ ಕಾನೂನಿಗೆ ಅನುಗುಣವಾಗಿ ಬೇಸಾಯ ಮಾಡುವ ರೈತರನ್ನು ಈಜಿತ್ತನೆ ಕಾಲದಲ್ಲಿ ಬೇಸಾಯ ಮಾಡದಂತೆ ಜಮೀನುದಾರರುಗಳು ಅನ್ಯಥಾ ತೊಂದರೆಗೊಳಪಡಿಸಿ ತಡೆಯುತ್ತಿದ್ದಾರೆಯೇ ವಿನಃ ರೈತರ ಗೊಂದಲವೇನೂ ಇಲ್ಲಾ. ಜಮೀನುದಾರರುಗಳು ತಡೆಯುತ್ತಿರುವುದು ಮಾತ್ರ ಭಯಂಕರ ಅನ್ಯಾಯವಾಗಿದೆ.

ಇದು ಕೇವಲ ತಾಲ್ಲೂಕಿನ ಪರಿಸ್ಥಿತಿಯಲ್ಲ. ಶ್ರೀ ಒಡೆಯರ ಊರಾದ ಕೇವಲ ಕಾಗೋಡು ಗ್ರಾಮವಾದ ಒಂದು ಊರಿನ ಒಬ್ಬ ಜಮೀನುದಾರರಿಗೂ ನೂರಾರು ಬಡ ಮತ್ತು ಕಷ್ಟಸಹಿಷ್ಣುಗಳಾದ ರೈತರಿಗೂ ಸಂಬಂಧಪಟ್ಟ ಏಕಮಾತ್ರ ವಿಚಾರ ಅಷ್ಟೇ! ರೈತರು ಇಂದಿನವರೆಗಿನ ಗೇಣಿಯನ್ನು ಪೂರ್ತಿ ಪಾವತಿ ಮಾಡಿರುತ್ತಾರೆ. ರೈತರು ಎಂದೂ ಸಾಗುವಳಿ ಮಾಡುವವರು. ಭೂಮಿಯ ಒಡೆಯರೆಂದು ಹೇಳಿಲ್ಲ. ರೈತರು ಕೊಟ್ಟಷ್ಟನ್ನು ಕೊಟ್ಟ ಪ್ರಮಾಣದಲ್ಲಿ ತೆಗೆದುಕೊಳ್ಳಬೇಕೆಂದು ಕೇಳಿದ್ದಾರೆ. ತಮ್ಮ ಸಾಗುವಳಿ ಹಕ್ಕಿಗೆ ರಕ್ಷಣೆ ಕೊಡಬೇಕೆಂದೂ ನ್ಯಾಯವಾಗಿ ಹಾಗೆ ಗೇಣಿ ಸಂದ ರಶೀತಿ ವಗೈರೆ ದಾಖಲಾತಿಗಳನ್ನು ಕೊಡಬೇಕೆಂದೂ ಕೇಳಿದ್ದಾರೆ.

ತಮ್ಮ ಸಾಗುವಳಿ ಹಕ್ಕಿಗೆ ರಕ್ಷಣೆಕೊಡಬೇಕೆಂದೂ ಪ್ರಾರ್ಥಿಸಿದ್ದಾರೆ. ಸತ್ಯಾಂಶ ಹೀಗಿದ್ದರೂ ಕೆಲವರು ಜಮೀನುದಾರರು, ರೈತರು ಎಂದೂ ಎಷ್ಟು ಮಾತ್ರಕ್ಕೂ ಹೇಳದ, ಮನಸ್ಸಿನಲ್ಲಿಯೂ ಸಹ ಯೋಚಿಸದ ಮಾತನ್ನು ರೈತರುಗಳ ಅಭಿಪ್ರಾಯವೆಂದು ಹೇಳಿ ಅಪಪ್ರಚಾರ ಮಾಡುತ್ತಿರುವುದು ಜನರಿಗೂ , ಸರ್ಕಾರಕ್ಕೂ ಮಂಕುಬೂದಿ ಎರಚಲು ಯತ್ನಿಸುತ್ತಿರುವುದು ತೀರ ಖಂಡನೀಯವಾಗಿದೆ.

ಕಾಗೋಡು ಗ್ರಾಮದ ಜಮೀನುದಾರರು ತಮಗೆ ಸರ್ಕಾರದ ಬೆಂಬಲವಿರುವುದರಿಂದಲೂ, ತಾವು ಪ್ರಭಾವಶಾಲಿಯಾದ ಕಾಂಗ್ರೆಸ್ ಮುಖಂಡರೆನಿಸಿಕೊಂಡಿರುವುದರಿಂದಲೂ, ಸರ್ಕಾರಕ್ಕೆ ಉತ್ಪ್ರೇಕ್ಷೆಯಿಂದ ಕೂಡಿದ ಸತ್ಯದೂರವಾದ ಸಂಗತಿಗಳನ್ನು ವರದಿ ಮಾಡಿ, ಅಕ್ರಮವಾಗಿ ಬಡ ಬೋರೇಗೌಡನ ಹಣದಿಂದ ತಮ್ಮ ಮನೆಗೆ ಸುಮಾರು ಮೂರು ತಿಂಗಳಿನಿಂದ, ಹದಿನೈದು ಇಪ್ಪತ್ತು ಜನ ಪೊಲೀಸಿನವರನ್ನೂ, ರಿಸರ್ವ್ ವಗೈರೆ ಚಾಲಕರನ್ನೂ ಸರ್ಕಾರದ ವೆಚ್ಚದಲ್ಲಿ ಪಡೆದುಕೊಂಡು ತಾವುಬಡ ರೈತರ ಬೂಟ್ಸ್‌ಮತ್ತು ಪಾದರಕ್ಷೆ ಪ್ರಯೋಗಗಳನ್ನು ಕೊಟ್ಟು, ಆರುಚಿಗಳನು ರೈತ ವರ್ಗವಾದ ಸ್ತ್ರೀ ಪುರುಷ, ಅಬಾಲವೃದ್ಧರಾದ ರೈತಬಾಂಧವರು ಎಂದೆಂದಿಗೂ ಮರೆಯದ ಮಾತಾಗಿ ಉಳಿದಿರುವುದು ಸ್ಪಷ್ಟವಾದ ಸಂಗತಿಯಾಗಿದೆ.

ಅಕ್ರಮವಾಗಿ ಸುಮಾರು ಇನ್ನೂರು ಜನ ಬಡರೈತರನ್ನು ಹಿಂಸಿಸಿ ದಸ್ತಗಿರಿ ವಗೈರೆ ಅಕ್ರಮ ಕಾನೂನು ಜಾರಿ ಮಾಡಿಸಿರುತ್ತಾರೆ. ಹಾಗೂ ಇದಕ್ಕೆಲ್ಲ ಮೂಲಕಾರಣರೂ, ಜಮೀನುದಾರರೂ ಆದ ನಿಮ್ಮಿಂದ ಮಾತ್ರವೇ ಹಲವು ಸುಳ್ಳು ಕೇಸುಗಳನ್ನೂ, ನೂರಾರು ಜನ ರೈತರ ಮೇಲೆಸಾಗರ ಸನ್ನಿಧಿ ಕೋರ್ಟ್ ಕಛೇರಿಗಳಲ್ಲಿ ದಾಖಲಾಗಿರುತ್ತದೆ.ಇಷ್ಟೇ ಸಾಲದೆಂದು ಮಹಿಳೆಯರನ್ನು ದಸ್ತಗಿರಿ ಮಾಡಿಸಿದ್ದಾರೆ.

ಎಲ್ಲಕ್ಕಿಂತ ಹೆಚ್ಚಾಗಿ ನೂರಾರು ಬಡಕುಟುಂಬಗಳನ್ನು ಮಳೆಗಾಲ ಪ್ರಾರಂಭವಾಗಿರುವ ಈ ಬಿತ್ತನೆ ಕಾಲದಲ್ಲಿ, ನಿರಾಶ್ರಿತರನ್ನಾಗಿಯೂ, ನಿರ್ಗತಿಕರನ್ನಾಗಿಯೂ ಮಾಡಿ, ದೇಶಾಂತರ ಓಡಿಸಲು ಯತ್ನಿಸುತ್ತಿದ್ದಾರೆ.ರೈತರ ಮೇಲೆ ಇಷ್ಟೆಲ್ಲಾ ಅತ್ಯಾಚಾರಗಳನ್ನು ನಡೆಸುತ್ತಲೇ ರೈತರಿಗೆ ವಿವೇಕ ಹೇಳಲು ಹೊರಟಿರುವುದು ಎಲ್ಲರಿಗೂ ತಿಳಿದಿದೆ. ಈ ಕಾಲದಲ್ಲಿ ಯಾರು ಯಾರನ್ನು ವಂಚಿಸಲು ಸಾಧ್ಯವಿಲ್ಲ.

ಕಾಂಗ್ರೆಸ್ಸಿನ ಮುಖಂಡರೆನಿಸಿಕೊಂಡು, ರೈತರ ಮೇಲೆ ನಿಷ್ಕರುಣೆಯಿಂದ ಲಾಠಿ ಪ್ರಹಾರ ಮಾಡಿಸುವುದಕ್ಕಿಂತ, ನೀವು ಗೌರವದಿಂದ ಕಾಂಗ್ರೆಸ್ಸಿಗೆ ರಾಜೀನಾಮೆಯಿತ್ತು ನಿಜವಾದ ಜಮೀನುದಾರರಾಗಿಯೇ, ನಿಜವೇಷದಿಂದಲೇ ಹೊರಬಂದರೆ ರೈತರಿಗೂ ದೇಶಕ್ಕೂ ತುಂಬಾ ಉಪಕಾರವಾದೀತು ಇಷ್ಟೆ ನನ್ನ ಸವಿನಯ ಪ್ರಾರ್ಥನೆ.

ಇಷ್ಟೆಲ್ಲಾ ಅಂಶಗಳೊಡನೆ ಅವಿರತ ಹೋರಾಟದೊಡನೆ ರೈತ ಸಂಘವು ಅಂತಿಮವಾಗಿ ಜಯಗಳಿಸಿ ಈ ದೇಶದಲ್ಲಿ ಮಾದರಿಯಾದ ಭೂಸುಧಾರಣಾ ಕಾಯ್ದೆ ರೂಪಗೊಳ್ಳಲು ಕಾರಣವಾಯಿತು.



# ಕಾಗೋಡು ಚಳವಳಿಯಲ್ಲಿ

# ಸಮಾಜವಾದಿ ಪಕ್ಷದ ಪ್ರವೇಶ

# ಕಾಗೋಡು ಚಳವಳಿಯಲ್ಲಿ ಸಮಾಜವಾದಿ ಪಕ್ಷದ ಪ್ರವೇಶ

ಕಾಗೋಡು ಚಳವಳಿ ಆರಂಭಕ್ಕೆ ಮುನ್ನವೇ ಸಮಾಜವಾದಿಪಕ್ಷ ನಾಡಿನಲ್ಲಿ ಅಸ್ತಿತ್ವಕ್ಕೆ ಬಂದಿತ್ತು. ಸಮಾನತೆ , ಸಮಾಜಿಕ ನ್ಯಾಯ,ಜನಪರ ಕಾಳಜಿ ಹೊಂದಿದ್ದ ಸಮಾಜವಾದಿ ಪಕ್ಷ ದೇಶದುದ್ದಗಲಕ್ಕೂ ಪಸರಿಸಿ ಹೊಸ ಅಲೆಯನ್ನು ಸೃಷ್ಟಿಸಿತ್ತು. ಕಾಂಗ್ರೆಸ್ ಪಕ್ಷದ ಪರ್ಯಾಯವಾದ ನೆಲೆಯಲ್ಲಿ ಸಮಾಜವಾದಿ ಪಕ್ಷ ರಾಷ್ಟ್ರವ್ಯಾಪಿ ನೆಲೆಯೂರುತಿತ್ತು.

ಕರ್ನಾಟಕ ಸಮಾಜವಾದಿ ಪಕ್ಷದ ಅಧ್ಯಕ್ಷರಾಗಿ ಸಿ.ಜಿ.ಕೆ.ರೆಡ್ಡಿಯವರು ವಹಿಸಿಕೊಂಡಿದ್ದರು. ರೆಡ್ಡಿಯವರ ನೇತೃತ್ವವಹಿಸಿದ್ದ ಸಮಾಜವಾದಿ ಪಕ್ಷ ನಾಡಿನಲ್ಲಿ ಭದ್ರನಲೆಗಟ್ಟನ್ನು ಒದಗಿಸಲು ಸಿ.ಜಿ.ಕೆ.ರೆಡ್ಡಿಯವರು ಕಾರಣಕರ್ತರಾದರು.ಆಗಿನ್ನು ಸಂಸ್ಥಾನದ ರಾಜಕೀಯ ಪಕ್ಷಗಳಲ್ಲಿ ಸಮಾಜವಾದಿ ಪಕ್ಷವು ಮಾತ್ರ ವಿವಾದಗಳಲ್ಲಿ ಆಸಕ್ತಿವಹಿಸುತ್ತಿತ್ತು. ಆಸಕ್ತಿ ಮತ್ತು ಹೋರಾಟ ಮನೋಭಾವವನ್ನು ರೂಢಿಸಿಕೊಂಡಿದ್ದ ಸಮಾಜವಾದಿಗಳಲ್ಲಿ ಶಿವಮೊಗ್ಗ ಜಿಲ್ಲೆಯ ಸದಾಶಿವರಾಯರು, ಮತ್ತು ಶಾಂತವೇರಿ ಗೋಪಾಲಗೌಡರು ಕಾಗೋಡಿನ ವಿವಾದಕ್ಕೆ ವಿಶೇಷವಾದ ಆಸ್ಥೆವಹಿಸಿದ್ದು. ಮುಂದಿನ ದಿನಗಳಲ್ಲಿ ಚಳವಳಿಗೆ ಪ್ರೇರಕವಾಯಿತು.

ಕಾಗೋಡಿನಲ್ಲಿ ನಡೆಯುತ್ತಿದ್ದ ಭೂಮಾಲೀಕರ ಶೋಷಣೆಯ ಬಗ್ಗೆ ಆಗಲೇ ಗೋಪಾಲಗೌಡರು, ಮುಂತಾದ ಸಮಾಜವಾದಿ ಮುಖಂಡರು ಕಂಡು ಬಂದಿದ್ದರು.ಆಗಿನ್ನು ಸಾಗರ ತಾಲ್ಲೂಕು ರೈತ ಸಂಘ ಮತ್ತು ಮಲೆನಾಡು ಗೇಣಿ ರೈತರ ಸಂಘಗಳು ಭೂಮಾಲೀಕರ ವಿರುದ್ಧ ಹೋರಾಟ ನಡೆಸುತ್ತಿದ್ದವು. ಶಿವಮೊಗ್ಗದ ಸರ್ಕೀಟ್ ಹೌಸ್‌ನಲ್ಲಿ ಗೇಣಿರೈತರಿಗೂ ಮತ್ತು ಭೂಮಾಲೀಕ ಪ್ರತಿನಿಧಿಗಳು ಸಂಧಾನಕ್ಕಾಗಿ ಭಾಗವಹಿಸುವಂತೆ ಸಭೆಯೊಂದನ್ನು ಕರೆಯಲಾಗಿತ್ತು. ಅಲ್ಲಿ ಸರ್ಕಾರದ ಪ್ರತಿನಿಧಿಗಳು ಭೂಮಾಲೀಕರ ಪರವಾದ ನಿಲುವು ತಾಳಿದ್ದರಿಂದ , ಚಳವಳಿಗೆ ಹಿನ್ನೆಡೆಯುಂಟಾಗಿತ್ತು ಇಂತಹ ಸಂದರ್ಭದಲ್ಲಿ ಹೋರಾಟಗಾರ ಗಣಪತಿಯಪ್ಪನವರೇ ಹೇಳುವಂತೆ "ರಾಜ್ಯದ ಸಮಾಜವಾದಿ ಪಕ್ಷದ ಮುಂದಾಳುಗಳಾಗಿದ್ದ ಶಾಂತವೇರಿ ಗೋಪಾಲಗೌಡರು ಮತ್ತು ವೈ.ಆರ್.ಪರಮೇಶ್ವರಪ್ಪನವರು ದೇವದೂತರಂತೆ ಬಂದು ತಮ್ಮ ಪಕ್ಷವನ್ನು ಈ ಸತ್ಯಾಗ್ರಹಕ್ಕೆ ತರದೇ ಇದ್ದಿದ್ದರೆ, ತೆಲಂಗಾಣದಲ್ಲಿ ನಕ್ಸಲೀಯರನ್ನು ಧ್ವಂಸ ಮಾಡಿದ ರೀತಿಯಲ್ಲಿ ಸರ್ಕಾರವು ತನ್ನ ಬಲದಿಂದ ಗೇಣಿರೈತರು ತಲೆ ಎತ್ತದಂತೆ ತುಳಿದು ಬಿಡುತ್ತಿತ್ತು ಎಂಬುದು ನನ್ನ ಸ್ಪಷ್ಟವಾದ ಅಭಿಪ್ರಾಯವಾಗಿ"ಎಂದು ತಿಳಿಸುತ್ತಾರೆ.

ಕಾಗೋಡು ಸತ್ಯಾಗ್ರಹ ಇನ್ನೂ ರೈತ ಸಂಘ ಮತ್ತು ಮಲೆನಾಡು ಸಂಘಗಳು ನಡೆಸುತ್ತಿದ್ದ ದಿನಗಳಲ್ಲೇ ಸಮಾಜವಾದಿ ಪಕ್ಷದ ಕಾರ್ಯಕರ್ತರು ಕರಪತ್ರಗಳನ್ನು ಮುದ್ರಿಸಿ ಜಮೀನುದಾರರ ವಿರುದ್ಧ ವಿರೋಧ ವ್ಯಕ್ತಪಡಿಸಿದ್ದರು.

ಕಾಗೋಡು ರೈತರೂ ಜಮೀನನ್ನು ಬಿಟ್ಟಿರುವುದಾಗಿ ಹಿಡುವಳಿದಾರರಿಗೆ ಬರೆದುಕೊಟ್ಟಿರುವುದಿಲ್ಲ. ಇಲ್ಲವೆ ಬಿಡುತ್ತೇವೆಂದು ಹೇಳಿಕೆ ಕೊಟ್ಟಿರುವುದಿಲ್ಲ.

ಹಿಡುವಳಿದಾರರು ರೈತರಿಗೆ ಯಾವುದೇ ವಿಧವಾದ ಲೇಖೀ ನೋಟೀಸುಗಳನ್ನು ಕೊಟ್ಟು, ಜಮೀನು ಬಿಡುವುದಕ್ಕೆ ತಿಳಿಸಿರುವುದಿಲ್ಲ. ಅಳತೆಯ ವಿಷಯದಲ್ಲಿ ವಿವಾದ ಬಂದ ೧೯೪೯ ೫೦ ಮತ್ತು ೧೯೫೦ ೫೧ ನೇ ಸಾಲಿನಲ್ಲಿ ಹಿಡುವಳಿದಾರರಿಗೆ ಕೊಡಬೇಕಾದ ಗೇಣಿಯ ಧಾನ್ಯವನ್ನು ಹಿಡುವಳಿದಾರರು ತೆಗೆದುಕೊಂಡು ಕ್ರಮವಾದ ರಶೀದಿ ಪಡೆಯಲಾಗಿದೆ. ಡಿಪೋದಲ್ಲಿಯ ಈ ಬಾಬ್ತು ಹಣವನ್ನೆಲ್ಲಾ ಹಿಡುವಳಿದಾರರು ತೆಗೆದುಕೊಂಡಿದ್ದಾರೆ.

೧೯೪೭ನೇ ಸಾಲಿನಿಂದಾಚೆಗೆ ಶೇಕಡಾ ೭೦ರಷ್ಟು ಗೇಣಿ ಹೆಚ್ಚಿಸಿದ್ದಾರೆ. ಆದರೆ ಜಮೀನಿನಲ್ಲಿ ಯಾವ ಹೊಸ ಕಾಮಗಾರಿಯನ್ನು ಮಾಡಿಸಿರುವುದಿಲ್ಲ.

ಪ್ರತಿಯೊಂದು ರೈತ ಕುಟುಂಬದಿಂದ ವರ್ಷಕ್ಕೆ ೫೦ ಆಳುಗಳವರೆಗೆ ಬಿಟ್ಟಿ ದುಡಿಮೆ ಮಾಡಿಸಿ ಪ್ರಯೋಜನ ಹೊಂದುತ್ತಿದ್ದಾರೆ. ಈಬಿಟ್ಟಿ ದುಡಿಮೆಯ ಸಂದರ್ಭದಲ್ಲಿ ರೈತರ ಆತ್ಮಗೌರವಕ್ಕೂ, ಸಾಮಾಜಿಕ ಗೌರವಕ್ಕೂ ಕುಂದು ಬರುವ ರೀತಿಯಲ್ಲಿ ಕೆಲಸಗಳನ್ನು ಮಾಡಿಸುತ್ತಿದ್ದರು. ಇಂಥಾ ಅಗೌರವಯುತವಾದ ಕೆಲಸವನ್ನು ಮಾಡಲು ಒಪ್ಪದೇ ಇರುವಾಗ ಬೈಯ್ಯುವುದೂ, ಹೊಡೆಯುವುದೂ, ಎಲ್ಲಕ್ಕಿಂತ ಹೆಚ್ಚಾಗಿ ಜಮೀನು ಕೊಡುವುದಿಲ್ಲವೆಂದೂ, ಊರು ಬಿಡಿಸುವೆವೆಂದೂ ಹೆದರಿಸುವುದೂ ವಗೈರೆ ಪದ್ಧತಿಗಳು ಈವರೆವಿಗೂ ಚಾಲ್ತಿಯಲ್ಲಿದ್ದವು.

ಈ ಮೇಲಿನ ವಿಚಾರಗಳನ್ನು ಭಿತ್ತಿ ಪತ್ರಗಳ ಮೂಲಕ ಹಂಚಿ ಜಮೀನ್ದಾರರ ಶೋಷಣೆಯ ವಿಚಾರದ ಮೇಲೆ ಬೆಳಕು ಚೆಲ್ಲುವಂತೆ ಬಿಂಬಿಸುತ್ತಿದ್ದರು. ಸತ್ಯಾಗ್ರಹಕ್ಕೆ ಸಮಾಜವಾದಿ ಪಕ್ಷ ಯಾವುದೇ ರೀತಿಯ ಅಧಿಕೃತ ಹೋರಾಟ ಆರಂಭಿಸದಿದ್ದರೂ ರಾಜ್ಯದ ಸಮಾಜವಾದಿ ಪಕ್ಷದ ಅಧ್ಯಕ್ಷ ಸಿ.ಜಿ.ಕೆ.ರೆಡ್ಡಿಯವರು ಕಾಂಗ್ರೆಸ್ ಸರ್ಕಾರದ ಗೃಹಮಂತ್ರಿಯವರನ್ನು ಭೇಟಿ ಮಾಡಿ ಕಾಗೋಡು ಚಳವಳಿ ಕುರಿತಂತೆ ಪತ್ರವನ್ನು ಬರೆದು ಷರತ್ತುಗಳನ್ನು ಅವರ ಮುಂದೆ ಮಂಡಿಸಿದರು.

ಧಾನ್ಯ ವಸೂಲಿಯ ಸಂಬಂಧದಲ್ಲಿ ನಡೆದ ಅತ್ಯಾಚಾರಗಳ ಬಗ್ಗೆ ತನಿಖೆ ನಡೆಸಬೇಕು. ಜಮೀನುದಾರರ ಪರವಾಗಿ ಕಂದಾಯ ಅಧಿಕಾರಿಗಳು ಗೇಣಿದಾರರಿಂದ ವಸೂಲು ಮಾಡಿರುವ ಭತ್ತವನ್ನು ಆಯಾ ರೈತರಿಗೆ ಕೊಡಬೇಕು ಇಂಥ ಅಧಿಕಾರಿಗಳ ಮೇಲೆ ಸೂಕ್ತ ಕ್ರಮ ಕೈಗೊಳ್ಳಬೇಕು.

ಬಂಧಿತರಾಗಿರುವವರನ್ನೆಲ್ಲ ಕೂಡಲೇ ಅನಿರ್ಬಂಧಿತವಾಗಿ ಬಿಡುಗಡೆ ಮಾಡಬೇಕು ಮತ್ತು ಕುಂಟುನೆಪಗಳ ಮೇಲೆ ಅವರ ಮೇಲೆ ಹೂಡಿರುವ ಮೊಕದ್ದಮೆಗಳನ್ನು ತಕ್ಷಣವೇ ವಾಪಸ್ಸು ಪಡೆಯಬೇಕು.

ಕಾಗೋಡು ಗ್ರಾಮದಲ್ಲಿ ಇಟ್ಟಿರುವ ಪೊಲೀಸು ಪಡೆಯನ್ನು ಕೂಡಲೇ ಹಿಂತೆಗೆದುಕೊಳ್ಳಬೇಕು.

ರೈತರಿಂದ ಪೊಲೀಸರು ಹಾಗೂ ಜಮೀನುದಾರರು ಕಿತ್ತಿಟ್ಟುಕೊಂಡಿರುವ ವ್ಯವಸಾಯದ ಉಪಕರಣಗಳನ್ನು ಕೂಡಲೇ ವಾಪಸ್ಸು ಮಾಡಬೇಕು ಮತ್ತು ಸರ್ಕಾರ ಗೇಣಿದಾರರನ್ನು ಒಕ್ಕಲೆಬ್ಬಿಸದಂತೆ ತುರ್ತು ಶಾಸನ ಮಾಡಬೇಕು.

"ಈ ಮೇಲ್ಕಂಡ ಷರತ್ತುಗಳನ್ನು ಮೇ ೧೫ನೇ ತಾರೀಖಿನೊಳಗಾಗಿ ಪೂರೈಸಿಕೊಡದೆ ಇದ್ದರೆ ಸಾಗರದಲ್ಲಿ ನಡೆಯುತ್ತಿರುವ ಅತ್ಯಾಚಾರವನ್ನು ತಡೆಗಟ್ಟಲು ಮತ್ತು ರೈತರ ಸ್ವಾತಂತ್ರ್ಯ ಮತ್ತು ಹಕ್ಕುಬಾಧ್ಯತೆಗಳನ್ನು ರಕ್ಷಿಸಲು ಸತ್ಯಾಗ್ರಹ ಹೂಡದೆ ಸೋಷಲಿಸ್ಟ್ ಪಾರ್ಟಿಗೆ ಬೇರೆ ದಾರಿಯೇ ಇಲ್ಲ" ಎಚ್ಚರಿಕೆ ನೀಡಿದರು.

ಈ ಸತ್ಯಾಗ್ರಹದಲ್ಲಿ ಬಹುಪಾಲು ಭಾಗವಹಿಸುವ ಸೂಚನೆ ಬಂದಿದ್ದರಿಂದ ಆಗಲೇ ಶಿವಮೊಗ್ಗದಲ್ಲಿ ಭೂಮಾಲಿಕ ಪ್ರತಿನಿಧಿ ಮತ್ತು ರೈತ ಪ್ರತಿನಿಧಿಗಳ ಸಂಧಾನ ಸಭೆಯಲ್ಲಿ ರೈತ ಪ್ರತಿನಿಧಿಗಳಿಗೆ ಹಿನ್ನಡೆಯುಂಟಾಗಿ ಸತ್ಯಾಗ್ರಹಕ್ಕೆ ಶಕ್ತಿ ಹೀನ ಸ್ಥಿತಿಯಲ್ಲಿದ್ದ ಸಮಯದಲ್ಲಿ ಸಮಾಜವಾದಿ ಧುರೀಣ ಗೋಪಾಲಗೌಡರು ಮತ್ತು ವೈ.ಆರ್.ಪರಮೇಶ್ವರಪ್ಪನವರು ಆಗಮಿಸಿ ಸಮಾಜವಾದಿ ಪಕ್ಷ ಸತ್ಯಾಗ್ರಹದಲ್ಲಿ ಭಾಗವಹಿಸುವುದಾಗಿ ಭರವಸೆ ನೀಡಿತು. ಮಾರನೆಯ ದಿನದಿಂದಲೇ ಅಂದರೆ ೧೯.೫.೧೯೫೧ ರಂದು ಸತ್ಯಾಗ್ರಹಕ್ಕೆ ಸಮಾಜವಾದಿ ಪಕ್ಷ ಭಾಗವಹಿಸಿ ಅಂದಿನ ಖ್ಯಾತ ಸಮಾಜವಾದಿ ಸದಾಶಿವರಾಯರು ಬಂಧಿತರಾದರು. ೨೦.೫.೧೯೫೧ರಂದು ಪ್ರಸಿದ್ಧ ಸಮಾಜವಾದಿ ಎಸ್.ರಾಮಯ್ಯನವರು ಕಾಗೋಡಿಗೆ ತೆರಳಿ ಸತ್ಯಾಗ್ರಹದಲ್ಲಿ ಪಾಲ್ಗೊಂಡು ರೈತರೊಂದಿಗೆ ಬಂಧಿತರಾದರು.

ದಿನಾಂಕ ೨೧.೫.೧೯೫೧ರಂದು ಕಾಗೋಡಿನಲ್ಲಿ ಗಣಪತಿಯಪ್ಪ ಮತ್ತು ಸಮಾಜವಾದಿ ಪಕ್ಷದ ಧುರೀಣ ಶಾಂತವೇರಿ ಗೋಪಾಲರು ರೈತರ ಸಭೆಯನ್ನು ಉದ್ದೇಶಿಸಿ ಮಾತನಾಡಿದರು. ಈ ಸಮಾರಂಭದಲ್ಲಿ ಸಮಾಜವಾದಿ ಪಕ್ಷ ಮತ್ತು ರೈತ ಸಂಘ ಎರಡೂ ಒಟ್ಟಿಗೆ ಹೋರಾಟ ನಡೆಸಬೇಕೆಂಬ ತೀರ್ಮಾನವನ್ನು ಕೈಗೊಂಡಿತು.

೨೨.೫.೧೯೫೧ರಂದು ದಾವಣಗೆರೆಯ ಸಮಾಜವಾದಿ ವಕೀಲ ಕೆ.ವೀರಭದ್ರಪ್ಪ ,ಶಿವಮೊಗ್ಗೆಯ ವಕೀಲ ಎಸ್.ಜಿ.ಗೋವಿಂದಪ್ಪನವರೊಂದಿಗೆ ಕಾಗೋಡು ರೈತರು ಸತ್ಯಾಗ್ರಹದಲ್ಲಿ ಪಾಲ್ಗೊಂಡು ಪೊಲೀಸರಿಂದ ಬಂಧಿಸಲ್ಪಟ್ಟರು.

ಡಾ.ಲೋಹಿಯಾ ಅವರ ಆಗಮನದಲ್ಲಿ ಕಾಗೋಡು ಚಳವಳಿ ರಾಷ್ಟ್ರ ಅಂತರರಾಷ್ಟ್ರೀಯ ವ್ಯಾಪಿಯಲ್ಲಿ ಮಿಂಚಿನ ಸಂಚಲನ ಉಂಟಾಗುವಂತೆ ಸುದ್ದಿ ಹಬ್ಬಿತು. ಕೇಂದ್ರಸರ್ಕಾರವು ಇತ್ತ ಕಣ್ಣಾಯಿಸುವಂತಾಯಿತು. ದಿನಾಂಕ ೧೩.೬.೧೯೫೧ರಲ್ಲಿ ದೆಹಲಿಯಿಂದ ಆಗಮಿಸಿದ್ದ ಡಾ.ರಾಮಮನೋಹರ ಲೋಹಿಯಾರವರು ಕಾಗೋಡಿಗೆ ಆಗಮಿಸಿ ರೈತರೊಂದಿಗೆ ಸತ್ಯಾಗ್ರಹ ನಡೆಸಿ

ಪೊಲೀಸರಿಂದ ಬಂಧಿತರಾಗಿದ್ದರು. ಇದಕ್ಕೂ ಸಾಗರಕ್ಕೆ ಆಗಮಿಸಿದ್ದ ಅವರು ಸಾಗರದ ಜೈಲಿನಲ್ಲಿದ್ದ ಸಮಾಜವಾದಿ ಸಂಗಾತಿಗಳನ್ನು, ರೈತ ಸಂಗಾತಿಗಳನ್ನು ಕಂಡು ಧೈರ್ಯತುಂಬಿದ್ದರು. ಅಂದೇ ಸಾಗರದ ಗಾಂಧಿ ಮೈದಾನದಲ್ಲಿ ಸಾರ್ವಜನಿಕರನ್ನುದ್ದೇಶಿಸಿ ಭೂಮಾಲೀಕರ ಮತ್ತು ಸರ್ಕಾರದ ನೀತಿ ನಿಲುವುಗಳನ್ನು ಖಂಡಿಸಿದ್ದರು.

ಸಮಾಜವಾದಿ ಹೋರಾಟಗಾರರಾದ ಶಾಂತವೇರಿ ಗೋಪಾಲಗೌಡರು ಮತ್ತು ಗರುಡಶರ್ಮರು ಪೊಲೀಸರ ಕೈಗೆ ಸಿಗದೆ ಭೂಗತರಾಗಿ ಚಳವಳಿಗೆ ರೈತರನ್ನು ಹುರಿದುಂಬಿಸುತ್ತಾ ಇದ್ದರು. ಇದೇ ವೇಳೆಗೆ ಬಿಹಾರದಿಂದ ದಿನಾಂಕ ೨೦.೬.೧೯೫೧ ರಂದು ಕಿಸಾನ್ ನಾಯಕ ರಮಾನಂದ ಮಿಶ್ರ ಅವರು ಭಾಗವಹಿಸಿ ಕಾಗೋಡು ಚಳವಳಿಯನ್ನು ಬೆಂಬಲಿಸಿ ಭಾಷಣ ಮಾಡಿದ್ದರು.

ಮತ್ತೊರ್ವ ಪ್ರಸಿದ್ಧ ಸಮಾಜವಾದಿ ಜಯಪ್ರಕಾಶ ನಾರಾಯಣರು ದಿನಾಂಕ ೨೧.೬.೧೯೫೧ರಂದು ಸಾಗರಕ್ಕೆ ಆಗಮಿಸಿದ್ದರು. ಜೆ.ಪಿ.ಯವರಿಗೆ ಸಾಗರದಲ್ಲಿ ಅಭೂತಪೂರ್ವವಾದ ಸ್ವಾಗತ ದೊರೆಯಿತು. ಸಾಗರಕ್ಕೆ ನೇರವಾಗಿ ಆಗಮಿಸಿದ್ದ ಅವರು ಸಾಗರದ ಜೈಲಿಗೆ ಭೇಟಿ ರೈತಮತ್ತು ಸಮಾಜವಾದಿ ಸಂಗಾತಿಗಳನ್ನು ಭೇಟಿ ನೀಡಿ ನಿಮ್ಮ ಸತ್ಯಾಗ್ರಹದ ವಿಷಯ ಇಡೀ ದೇಶಕ್ಕೆ ತಿಳಿದಿದೆ. ನೀವು ಧೈರ್ಯವಾಗಿ ಹೋರಾಡಿರಿ ಜಯ ನಿಮಗೆ ಸಿಕ್ಕೇಸಿಗುತ್ತದೆ ಎಂದು ಹೇಳಿ ಚಳವಳಿಕಾರರನ್ನು ಹುರಿದುಂಬಿಸಿದರು. ಅಂದೇ ಸಾರ್ವಜನಿಕರನ್ನುದ್ದೇಶಿಸಿ ಭಾಷಣ ಮಾಡಿದರು.

ಭೂಗತರಾಗಿ ಪೊಲೀಸರ ಕೈಗೆ ಸಿಗದೆ ಸತ್ಯಾಗ್ರಹವನ್ನು ನಡೆಸುತ್ತಿದ್ದ ಶಾಂತವೇರಿ ಗೋಪಾಲಗೌಡರು, ಗಂಡುಗಲಿ, ಬಾ.ಸು.ಕೃಷ್ಣಮೂರ್ತಿ ಇವರೊಂದಿಗೆ ಕಾರ್ಯನಿರ್ವಹಿಸುತ್ತಿದ್ದವರನ್ನು ದಿನಾಂಕ ೪.೭.೧೯೫೧ ರಂದು ಬಂಧಿಸಿದರು.

ಇವರಲ್ಲದೆ ದಿನಕರ ದೇಸಾಯಿಯುವರು, ಬಸವಾನಿರಾವುಶರ್ಮರು, ಶ್ರೀ ರಾಜಗೋಪಾಲಚಾರ್ಯರು, ಮುಲ್ಕಾಗೋವಿಂದರೆಡ್ಡಿ, ಗಂಡುಗಲಿ. ಹೆಚ್.ಎಸ್.ಸೀತರಾಂ, ಎಂ.ಪಿ.ಈಶ್ವರಪ್ಪ, ಈರಮಾರ್‍ಯಕತ್ತಿ, ಸೀತರಾಮಅಯ್ಯಂಗಾರ್,ಖಾದ್ರಿ ಶಾಮಣ್ಣ, ಕುಪ್ಪಗುಡ್ಡೆ ಮರಿಯಪ್ಪನವರು, ಪಾಣಿಬಸವಣ್ಯಪ್ಪ, ಮುಂತಾದ ಸಮಾಜವಾದಿ ನಾಯಕರು ಕಾಗೋಡು ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಕಾಗೋಡು ಚಳವಳಿಯ ಯಶಸ್ಸಿಗೆ ಕಾರಣಕರ್ತರಾಗಿದ್ದಾರೆ.



# ಕಾಗೋಡು ಚಳವಳಿಯ ರೂವಾರಿ ಹೆಚ್. ಗಣಪತಿಯಪ್ಪ

ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಹೊಸೂರು ಗ್ರಾಮದ ತಂದೆ ಕನ್ನಪ್ಪ, ತಾಯಿ ಕನ್ನಮ್ಮನವರ ಮೂರನೇ ಪುತ್ರರಾಗಿ ಹೆಚ್.ಗಣಪತಿಯಪ್ಪನವರು ಜನಿಸಿದರು. ಗೇಣಿ ರೈತರ ಕುಟುಂಬದವರಾದ ಕನ್ನಪ್ಪನವರು ಗೇಣಿ ಜಮೀನಿಗಾಗಿ ಬೇರೆ ಬೇರೆ ಸ್ಥಳಕ್ಕೆ ಹೋಗಿ ನೆಲೆಸುತ್ತಿದ್ದರು. ಇವರ ಪೂರ್ವಜರು ಸಾಗರ ತಾಲ್ಲೂಕಿನ ಶಿರುವಾಳ ಗ್ರಾಮದವರೇ ಆಗಿದ್ದರು. ಮೂಲ್ಕಿ ಪರೀಕ್ಷೆಯವರೆಗೆ ವಿದ್ಯಾಭ್ಯಾಸ ಮಾಡಿದ್ದ ಗಣಪತಿಯಪ್ಪನವರಿಗೆ ಆಗಿನ ದಿನಗಳಲ್ಲಿ ಅಮಲ್ದಾರರಾಗುವ ಅವಕಾಶವಿತ್ತು. ಬಡತನ ಕಾರಣದಿಂದಾಗಿ ಹೆಚ್ಚಿನ ವಿದ್ಯಾಭ್ಯಾಸ ಮಾಡಲಾಗದೆ ಸ್ವಾತಂತ್ರ್ಯ ಪೂರ್ವ ಮುಂಬಯಿ ಪ್ರಾಂತ್ಯದ ಚುನಾಯಿತ ಗ್ರಾಮಪಂಚಾಯಿಯ ಕಾರ್ಯದರ್ಶಿಯಾಗಿ ಎರಡು ವರ್ಷಗಳ ಕಾಲ ಸೇವೆ ಸಲ್ಲಿಸಿದರು.

ಇದೇ ವೇಳೆಗೆ ರಾಷ್ಟ್ರದುದ್ದಕ್ಕೂ ಸ್ವಾತಂತ್ರ್ಯದ ಕಳಹೆ ಮೊಳಗಿತ್ತು 1942 ರಲ್ಲಿ ಮುಂಬಯಿಯ ಅಜಾದ್ ಮೈದಾನದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಇದರಲ್ಲಿ ಗಣಪತಿಯಪ್ಪನವರು ಭಾಗವಹಿಸಿದ್ದರು. ಈ ಸಭೆಯಲ್ಲಿ ಬ್ರಿಟಿಷರೇ ಭಾರತ ಬಿಟ್ಟು ತೊಲಗಿ ಎಂಬ ಕರೆಗೆ ಓಗೊಟ್ಟು ಚಳವಳಿಗೆ ಧುಮುಕಿದರು. ಚಳುವಳಿಯಲ್ಲಿ ಭಾಗವಹಿಸಿದ ವಿಷಯ ಸರ್ಕಾರಕ್ಕೆ ತಿಳಿದು ಕೆಲಸದಿಂದ ತೆಗೆದು ಹಾಕಿತು.

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದ ಪರಿಣಾಮವಾಗಿ ರಾಜ್ಯದಲ್ಲಿ ಚಳವಳಿ ಸಕ್ರಿಯವಾಗಿ ಭಾಗವಹಿಸಿ ಅನೇಕ ಬಾರಿ ಕರಪತ್ರವನ್ನು ಹಂಚಿ ಆ ದಿನಗಳಲ್ಲಿ ಪೊಲೀಸರಿಂದ ಬಂಧಿತರಾಗಿದ್ದರು. ಈ ವಿಚಾರ ತಿಳಿದ ಅವರ ಕುಟುಂಬದವರಿಗೆ ಗಣಪತಿಯಪ್ಪನವರು ಮಾಡುತ್ತಿರುವುದು ಸರಿ ಎನಿಸಲಿಲ್ಲ. ಇದರಿಂದಾಗಿ ಮನೆಯಿಂದಲೂ ಕಿರಿಕಿರಿ ಅನುಭವಿಸಿದ್ದ ಗಣಪತಿಯಪ್ಪನವರು ಒಂದು ದಿನ ಮನೆ ಬಿಟ್ಟು ಹೊರಬಂದರು. ಆಗ ಸಾಗರ ತಾಲೂಕಿನ ಸಣ್ಣ ಮನೆ ಎಂಬ ಗ್ರಾಮಕ್ಕೆ ಆಗಮಿಸಿ ಅಲ್ಲಿ ಕುಂಬಾರ ದಬ್ಬಣ್ಣ ಎಂಬುವವರ ಮನೆಯಲ್ಲಿ ಆಶ್ರಯ ಪಡೆದರು.

ದಬ್ಬಣ್ಣನವರಿಂದ ಹಿರೇನಲ್ಲೂರಿನ ಕಳ್ಳುಡಿ ದ್ಯಾವಪ್ಪಯ್ಯರಿಗೆ, ಗಣಪತಿಯಪ್ಪನವರನ್ನು ಪರಿಚಯಿಸಿ ಹಿರೇನಲ್ಲೂರಿಗೆ ಕಳಹಿಸಿಕೊಟ್ಟರು. ಆಗಿನ ಕಾಲಕ್ಕೆ ದೀವರ ಜನಾಂಗದಲ್ಲಿ ಮೂಲ್ಕಿ ಪರೀಕ್ಷೆ ಪಾಸು ಮಾಡಿದ ಏಕೈಕ ವ್ಯಕ್ತಿ ಗಣಪತಿಯಪ್ಪನವರಾಗಿದ್ದರು. ಇವರ ಬೆನ್ನ ಹಿಂದೆ ಊರಿನ ಪ್ರಮುಖರು ಸೇರಿ ತಮ್ಮ ಮಕ್ಕಳ ವಿದ್ಯಾಭ್ಯಾಸ ಮಾಡಿಸುವುದಕ್ಕಾಗಿ ಗಣಪತಿಯಪ್ಪ ಮಾಸ್ತರರನ್ನು ನೇಮಿಸಿಕೊಂಡು ವಿದ್ಯಾರ್ಜನೆ ಮಾಡುವಂತೆ ಅನುವು ಮಾಡಿಕೊಟ್ಟಿದ್ದರು. ಮೇಷ್ಟ್ರಾಗಿ ಇಡೀ ಊರಿನ ಗೌರವಕ್ಕೆ ಪಾತ್ರರಾದರು.

1938ರಲ್ಲಿ ಅಲ್ಲಿನ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲು ಅನುಭವಿಸಿ ಬಂದಿದ್ದರು. ಕಾಂಗ್ರೆಸ್ ಪಕ್ಷದಲ್ಲಿ ಗುರುತಿಸಿಕೊಂಡಿದ್ದ ಗಣಪತಿಯಪ್ಪನವರು. ಊರಿನ ಮುಖಂಡರಾಗಿದ್ದ ದ್ಯಾವಪ್ಪನರೊಂದಿಗೆ ಊರಿನ ವ್ಯವಹಾರಗಳಲ್ಲಿ ಭಾಗವಹಿಸಿದರು. ಸೂಕ್ಷ್ಮ ವಿಚಾರವಾದಿಯಾಗಿದ್ದ ಗಣಪತಿಯಪ್ಪನವರು ತಮ್ಮ ಜನಾಂಗದವರಿಗೆ ಭೂಮಾಲೀಕರು ಮಾಡುತ್ತಿದ್ದ ಅನ್ಯಾಯವನ್ನು ಸೂಕ್ಷ್ಮವಾಗಿ ಗ್ರಹಿಸುತ್ತಿದ್ದರು.

ಗಣಪತಿಯಪ್ಪನವರ ಸೂಕ್ಷ್ಮಮತಿ, ವಿಚಾರವಂತಿಕೆ ಗಮನಿಸಿದ್ದ ದ್ಯಾವಪ್ಪನವರಿಗೆ ಅಚ್ಚುಮೆಚ್ಚು. ದ್ಯಾವಪ್ಪನವರ ಪ್ರೀತಿಗೆ ಪಾತ್ರರಾಗಿದ್ದ ಗಣಪತಿಯಪ್ಪನವರಿಗೆ, ದ್ಯಾವಪ್ಪನವರ ಚಿಕ್ಕಮ್ಮನವರ ಮಗಳು ಮಂಜಮ್ಮನವರನ್ನು ಮದುವೆ ಮಾಡಿಕೊಡಲಾಯಿತು.

ಹಿರೇನಲ್ಲೂರಿನ ಈಶ್ವರ ಗುಡಿಯ ಮೂರ್ತಿಯು ಮುಕ್ಕಾಗಿದ್ದರ ಪರಿಣಾಮವಾಗಿ ಊರಿನ ಜನತೆಗೆ ರೋಗ ರುಜಿನಗಳು ಹೆಚ್ಚಾಗಿವೆ ಎಂಬ ವಾರ್ತೆ ಹಿರಿಯರಿಂದ ಬಂದ ಕಾರಣ ಮೂರ್ತಿಯನ್ನು ಲಿಂಗಾಯಿತರು, ದೀವರು ಎಲ್ಲಾ ಗ್ರಾಮಸ್ಥರು ಸೇರಿ ಪುನರ್ ಪ್ರತಿಷ್ಠಾಪಿಸಲು ಯೋಜಿಸಿದರು. ಇದರಂತೆ ಎಲ್ಲರೂ ದವಸಧಾನ್ಯ ಮತ್ತು ನಗದು ವಂತಿಗೆ ನೀಡುವಂತೆ ನಿರ್ದೇಶಿಸಲಾಗಿತ್ತು. ಇದರಂತೆ ಎಲ್ಲರೂ ವಂತಿಗೆ ನೀಡಿದರು. ಮೂರ್ತಿ ಪ್ರತಿಷ್ಠಾಪನೆಗೆ ಆಹ್ವಾನಪತ್ರಿಕೆಯನ್ನು ಮುದ್ರಿಸಲಾಗಿತ್ತು ಆದರೆ ಆಹ್ವಾನಪತ್ರಿಕೆಯಲ್ಲಿ ಕೊಡುಗೆ ವೀರಶೈವಮಂಡಳಿ ಎಂದಷ್ಟೇ ಮುದ್ರಿಸಿದ್ದನ್ನು ಗಣಪತಿಯಪ್ಪನವರನ್ನು ಕೆರಳಿಸಿತ್ತು . ಇದನ್ನು ಹಿರೇನಲ್ಲೂರಿನ ಮುಖಂಡರ ಮುಂದೆ ಓದಿ ತಿಳಿಸಿದಾಗ ದೀವರ ಮುಖಂಡರ ಸ್ವಾಭಿಮಾನಕ್ಕೆ ಧಕ್ಕೆಯಾಯಿತು. ಈಗ ನಾವು ನಮ್ಮ ಸಮಾಜದ ಹೆಸರಲ್ಲಿ ಕರಪತ್ರ ಮುದ್ರಿಸೋಣ ಎಂದು ಗಣಪತಿಯಪ್ಪನವರ ನೇತೃತ್ವದಲ್ಲಿ ತೀರ್ಮಾನವಾಯಿತು. ಅದರಂತೆ ದೀವರ ಮಂಡಳಿಯೆಂದು ಆಹ್ವಾನಪತ್ರಿಕೆಯನ್ನು ಅಚ್ಚು ಹಾಕಿಸಿ ಊರಿನ ಗ್ರಾಮಸ್ಥರಿಗೆಲ್ಲಾ ಹಂಚಲಾಯಿತು. ಈ ಸುದ್ದಿ ಕಾಳ್ಗಿಚ್ಚಿಂತೆ ಊರ ತುಂಬ ಹಬ್ಬಿ ಭೂಮಾಲಿಕರ ಕೆಂಗಣ್ಣಿಗೆ ಗುರಿಯಾಯಿತು.

ಊರಿನಲ್ಲೆಲ್ಲಾ ವಂತಿಗೆ ಎತ್ತಿ ತಮ್ಮ ಮಂಡಳಿ ಹೆಸರನ್ನು ಹಾಕಿಕೊಳ್ಳುವುದು ಯಾವ ನ್ಯಾಯ ಎಂದು ಪ್ರಶ್ನಿಸ ತೊಡಗಿದರು. ಇದಕ್ಕೆ ಸ್ವಾಮಿಗಳು ಒಪ್ಪಿತ ಸೂಚನೆ ನೀಡಿದರು. ಭೂಮಾಲಿಕರ ಕೆಂಗಣ್ಣಿಗೆ ಗುರಿಯಾದ ಗಣಪತಿಯಪ್ಪನವರನ್ನು ಬಹಿಷ್ಕಾರ ಹಾಕಲು ಯತ್ನಿಸಲಾಯಿತು. ಆದರೆ ಅದು ವಿಫಲವಾಯಿತು. ಸಂಘಟಿತರಾಗುವ ಗುಣವನ್ನು ಕಂಡುಕೊಂಡಿದ್ದ ಗಣಪತಿಯಪ್ಪನವರು ಊರಿನ ಮುಖಂಡರೊಂದಿಗೆ ಸಭೆ ಸೇರಿ ಭೂಮಾಲಿಕರು ಮಾಡುತ್ತಿರುವ ಅನ್ಯಾಯ ಗೇಣಿ ನೀಡುವಲ್ಲಿ ಆಗುತ್ತಿರುವ ಅನ್ಯಾಯದ ಬಗ್ಗೆ ಸವಿವರವಾಗಿ ತಿಳಿಸಿ ಜಾಗೃತಿ ಮೂಡಿಸಿದರು. ದಿನೇ ದಿನೇ ಸಭೆಯಲ್ಲಿ ರೈತರಿಗೆ ಜಾಗೃತಿಯನ್ನು ಮೂಡಿಸಿ ಚಳವಳಿ ಪೂರಕ ಶಕ್ತಿಯಾಗಿ ಬೆಳೆಸುತ್ತಾ ಬಂದರು.



## ಸಾಗರ ತಾಲೂಕು ರೈತ ಸಂಘ ಅಸ್ತಿತ್ವ

ದಿನಾಂಕ 4.1.1951ರಂದು ಸಾಗರ ತಾಲೂಕು ರೈತ ಸಂಘವನ್ನು ಅಸ್ತಿತ್ವಕ್ಕೆ ತಂದರು. ಅದರ ಅಧ್ಯಕ್ಷರಾಗಿ ಡಿ.ಮೂಕಪ್ಪನವರು, ಕಾರ್ಯದರ್ಶಿಯಾಗಿ ಗಣಪತಿಯಪ್ಪನವರು ಉಳಿದ ಒಂಭತ್ತು ಮಂದಿ ಬರಸಿನ ದ್ಯಾವಪ್ಪ, ಸವಾಜಿ ಬೀರನಾಯ್ಕರು, ಭೈರಪ್ಪನವರು, ರಾಮಾನಾಯ್ಕರು, ಹೊಸೂರು ರಾಮನಾಯ್ಕರು,ರಾಮನಾಯ್ಕರು,ಡಿ.ಆರ್.ಹುಚ್ಚಪ್ಪನವರು, ಮಂಜಪ್ಪನವರು,ಚೌಡಪ್ಪನವರು, ಸದಸ್ಯರಾಗಿದ್ದ ರೈತ ಸಂಘ ಅಸ್ತಿತ್ವಕ್ಕೆ ಬಂದಿತು. ರೈತ ಸಂಘ ಬೇಡಿಕೆಗಳನ್ನು ಸರ್ಕಾರದ ಮುಂದೆ ,ರೈತರ ಮುಂದೆ ಇಡತೊಡಗಿತು.

ರೈತರು ಗೇಣಿ ಕೊಡುವಾಗ ಭೂಮಾಲೀಕರಿಂದ ರಶೀತಿ ಪಡೆಯಬೇಕು. ಅಳತೆ ಪ್ರಮಾಣದಲ್ಲಿ ಆಗುತ್ತಿದ್ದ ವ್ಯತ್ಯಾಸದ ಬಗ್ಗೆ ಅರಿವು ಮೂಡಿಸುತ್ತಿದ್ದರು. ಬಿಟ್ಟಿಯಾಗಿ ದುಡಿಯುವುದು ಮುಂತಾದ ಪದ್ಧತಿಯನ್ನು ತೀವ್ರವಾಗಿ ಸಂಘ ವಿರೋಧಿಸುತ್ತಾ ಬಂದಿತು.

ಇತ್ತ ರೈತ ಸಂಘಟನೆ ಪ್ರಾರಂಭವಾಗಿದ್ದನ್ನು ಕಂಡು ಭೂಮಾಲಿಕರು ಸಾಗರ ತಾಲೂಕು ಭೂಹಿಡುವಳಿದಾರರ ಸಂಘವನ್ನು ಸ್ಥಾಪಿಸಿಕೊಂಡು ರೈತ ಸಂಘಟನೆಯನ್ನು ವಿಫಲಗೊಳಿಸಲು ಯತ್ನಿಸಿತು.ರೈತ ಸಂಘದ ಕಾರ್ಯಕರ್ತರಾಗಿದ್ದ ಕಾಗೋಡಿನ ರೈತರು, ಕಾಗೋಡಿನ ಒಡೆಯರು ಮಾಡುತ್ತಿದ್ದ ಅನ್ಯಾಯಗಳನ್ನು ಅರಿಯುತ್ತಾ ಬಂದರು. ಇದರ ಪರಿಣಾಮ ಕಾಗೋಡನ್ನು ಚಳವಳಿಯ ಕೇಂದ್ರವಾಗಿ ಮಾಡಿಕೊಂಡರು.

ಕಾಗೋಡಿನಲ್ಲಿ ಒಡೆಯವರ ವಿರುದ್ಧ ಗೇಣಿ ನೀಡುವಲ್ಲಿ ತಕರಾರು ಉಂಟಾಗಿ, ಮೂರು ಸೇರು ಬತ್ತ ಮಾತ್ರ ಗೇಣಿ ನೀಡುವುದಾಗಿ ಗೇಣಿರೈತರು ತಿರುಗಿಬಿದ್ದರು. ಒಡೆಯರು ಮೂರುವರೆ ಸೇರು ಮತ್ತು ನಾಲ್ಕು ಸೇರಿನ ಕೊಳಗದಲ್ಲಿ ಮಾತ್ರ ಗೇಣಿ ಪಡೆಯುವುದಾಗಿ ಪಟ್ಟು ಹಿಡಿದರು. ಇದರಿಂದಾಗಿ ಒಡೆಯರು ಜಮೀನಿನಲ್ಲಿ ಬೆಳೆ ಮಾಡಲು ಪ್ರವೇಶಿಸದಂತೆ ತಡೆ ಒಡ್ಡಿದರು. ಇದರ ಪರಿಣಾಮವಾಗಿ ರೈತರು ರೊಚ್ಚಿಗೆದ್ದು, ಚಳುವಳಿಗೆ ನಿರತರಾದರು. ರೈತ ಸಂಘಟನೆಯು ದಿನಾಂಕ18.4.1951 ರಂದು ಸತ್ಯಾಗ್ರಹವನ್ನು ಪ್ರಾರಂಭಿಸಿತು. ಭೂಮಾಲೀಕರು ಚಳವಳಿಯನ್ನು ಮುರಿಯಲು ಯತ್ನಿಸಿದರು. ಆದರೆ ಚಳವಳಿ ತೀವ್ರವಾಗುತ್ತಾ ಸಾಗುತ್ತಿತ್ತು.

ಗಣಪತಿಯಪ್ಪನವರು ಪೊಲೀಸರ ಕಣ್ಣಿಗೆ ಕಾಣದೆ ಭೂಗತರಾಗಿ ರೈತ ಚಳವಳಿಗಾರರಿಗೆ ನಿರ್ದೇಶನ ನೀಡತೊಡಗಿದರು. ಒಮ್ಮೆ ಬೆಂಗಳೂರಿನಿಂದ ಆಗಮಿಸಿದ್ದ ಐಜಿಪಿಯವರನ್ನು ಕಂಡು ಗಣಪತಿಯಪ್ಪನವರು ಕಾಗೋಡಿನಲ್ಲಿ ನಡೆಯುತ್ತಿದ್ದ ವಿವರಗಳನ್ನೆಲ್ಲಾ ನೀಡಿದರು. ಆದರೆ ಯಾವುದೇ ರೀತಿಯ ಪ್ರತಿಕ್ರಿಯೆ ಬಾರದೆ ವಾಪಸ್ಸಾದರು. ನಂತರ ತಾನು ಭೂಗತನಾಗಿ ಕಾರ್ಯನಿರ್ವಹಿಸುವ ನಿರ್ಣಯವನ್ನು ಸಭೆಯಲ್ಲಿ ಕೈಗೊಂಡರು.

ಇದೇ ಸಂದರ್ಭದಲ್ಲಿ ಜಿಲ್ಲಾಧಿಕಾರಿಗಳು ಪತ್ರವೊಂದನ್ನು ಬರೆದು ರೈತ ಪ್ರತಿನಿಧಿಗಳು ಮತ್ತು ಭೂಮಾಲಿಕ ಪ್ರತಿನಿಧಿಗಳು ಮಾತುಕತೆಗಾಗಿ ಶಿವಮೊಗ್ಗದ ಸರ್ಕಿಟ್ ಹೌಸ್‌ನಲ್ಲಿ ಭಾಗವಹಿಸಬೇಕೆಂಬ ಪತ್ರವನ್ನು ರೈತ ಮುಖಂಡರಿಗೆ ಕಳುಹಿಸಲಾಯಿತು.

ರೈತ ಮುಖಂಡರು ಮತ್ತು ಭೂಮಾಲಿಕ ಪ್ರತಿನಿಧಿಗಳು ಹಾಗೂ ಸರ್ಕಾರದ ಪ್ರತಿನಿಧಿಗಳು ಭಾಗವಹಿಸಿದ್ದ ಸಭೆಯಲ್ಲಿ ಯಾವುದೇ ತೀರ್ಮಾನ ಕೈಗೊಳ್ಳಲಾಗದೆ ರೈತರು ಮತ್ತು ಭೂಮಾಲೀಕರು ಹೊಂದಾಣಿಕೆ ಮಾಡಿಕೊಂಡು ಹೋಗಬೇಕೆಂಬ ಉತ್ತರ ಬಂತು. ಇದರಿಂದ ರೈತರು ನಿರಾಶೆಗೊಂಡರು. ಒಂದು ಹಂತದಲ್ಲಿ ಚಳುವಳಿ ಸಾಮರ್ಥ್ಯವಿಲ್ಲದಂತಾಯಿತು.

ಇದೇ ಸಂದರ್ಭಕ್ಕೆ ಸಮಾಜವಾದಿ ಪಕ್ಷದ ವರಿಷ್ಠ ನಾಯಕ ಎಸ್.ಗೋಪಾಲಗೌಡರು ಮತ್ತು ವೈ.ಆರ್.ಪರಮೇಶ್ವರಪ್ಪನವರು ದೇವದೂತರಂತೆ ಬಂದರು ಎಂದು ಹೇಳುವ ಗಣಪತಿಯಪ್ಪನವರು. ಇವರ ಆಗಮನದಿಂದಾಗಿ ಚಳುವಳಿ ಮತ್ತಷ್ಟು ಶಕ್ತಿ ತುಂಬಿ ಬಂತು ಎನ್ನುತ್ತಾರೆ.

ಮಾರನೆಯ ದಿನವೇ ಸಮಾಜವಾದಿ ಪಕ್ಷ ಮತ್ತು ರೈತ ಸಂಘಟನೆಗಳು ಎರಡೂ ಒಟ್ಟಾಗಿ ಸೇರಿ ಚಳುವಳಿ ಮಾಡುವುದಾಗಿ ಒಪ್ಪಂದವಾಗಿ ಮೊದಲನೆ ದಿನವೇ ಪ್ರಸಿದ್ಧ ಸಮಾಜವಾದಿ ಜಿ.ಸದಾಶಿವರಾಯರು ಕಾಗೋಡಿನ ಪ್ರದೇಶಕ್ಕೆ ಹೋಗಿ ಸತ್ಯಾಗ್ರಹದಲ್ಲಿ ಭಾಗವಹಿಸಿ ರೈತರೊಂದಿಗೆ ಬಂದಿಯಾದರು. ಇತರೆ ಸಮಾಜವಾದಿ ಗಣ್ಯರು ಬಂಧಿಯಾದರು.

ಡಾ.ರಾಮಮನೋಹರ ಲೋಹಿಯಾ, ರಮಾನಂದ ಮಿಶ್ರ, ಬಾದ್ರಿ ಶಾಮಣ್ಣ,ಗಂಡುಗಲಿ,ಗರುಡಶರ್ಮ ಮುಂತಾದ ಸಮಾಜವಾದಿ ನಾಯಕರು ಭಾಗವಹಿಸಿ ಉಳುವವನೆ ನೆಲದೊಡೆಯ ಎಂಬ ಘೋಷಣೆ ಸಾಕಾರಗೊಳ್ಳಲು ಸಾಧ್ಯವಾಯಿತು. ಚಳುವಳಿಯ ಪರಿಣಾಮದಿಂದಾಗಿ ಭೂಸುಧಾರಣೆಯಾಗಲು ಕಾರಣವಾಯಿತು.

ಗಣಪತಿಯಪ್ಪನವರು ಸಮಾಜವಾದಿ ಪಕ್ಷದಿಂದ ವಿಧಾನಸಭಾ ಚುನಾವಣೆ ಎದುರಿಸಲು ರೈತ ಸಂಘದ ಪ್ರಮುಖರು ಕೇಳಿಕೊಂಡರೂ ಒಪ್ಪದೆ ಹೋದರು. ಇದಾದ ಕೆಲವೇ ದಿನಗಳಲ್ಲಿ ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಸೋತರು.

ಕಾಗೋಡು ಚಳುವಳಿಯ ರೂವಾರಿಯಾಗಿ ಇಂದಿಗೂ ಸಹ ಒಬ್ಬ ಬಡರೈತನಾಗಿಯೇ ಉಳಿದಿರುವ, ಓರ್ವ ಸರಳ, ಕ್ರಾಂತಿಕಾರಿ ಹೋರಾಟಗಾರ,ಅಧ್ಯಯಶೀಲ 80 ನೇ ವಯಸ್ಸಿನ ಗಣಪತಿಯಪ್ಪನವರು ಸಾಗರ ತಾಲ್ಲೂಕಿನ ವಡ್ನಾಳ್ ಗ್ರಾಮದಲ್ಲಿ ನೆಲೆಸಿದ್ದಾರೆ.



# ಸಮಾಜವಾದಿ ನಾಯಕ ಶಾಂತವೇರಿ ಗೋಪಾಲಗೌಡರು

1923ರ ಮಾರ್ಚ್14ರಂದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಅರಗ ಗ್ರಾಮದ ತಂದೆ ಕೊಲ್ಲೂರಯ್ಯಗೌಡರು ತಾಯಿ ಶೇಷಮ್ಮನವರ ಪುತ್ರರಾಗಿ ಶಾಂತವೇರಿ ಗೋಪಾಲಗೌಡರು ಜನಿಸಿದರು.ಶಾಂತವೇರಿ ಅವರ ಮನೆತನದ ಹೆಸರಾದ್ದುದರಿಂದ ಅವರ ಹೆಸರಿನ ಮುಂದೆ ಶಾಂತವೇರಿ ಎಂದು ಕರೆಯಲ್ಪಟ್ಟಿತು. ಬಡತನದಲ್ಲಿ ಹುಟ್ಟಿದ್ದ ಗೌಡರಿಗೆ ಪ್ರಾಥಮಿಕ ಮಾಧ್ಯಮಿಕ ಶಿಕ್ಷಣ ತನ್ನೂರಲ್ಲೇ ಮುಗಿಸಿದರು. ಶಿಕಾರಿಪುರದಲ್ಲಿ ಗೋಪಾಲಗೌಡರು ಲೋಯರ್ ಸೆಕೆಂಡರಿ ಪರೀಕ್ಷೆ ಮುಗಿಸಿದರು.

1941ರಲ್ಲಿ ತೀರ್ಥಹಳ್ಳಿಯಲ್ಲಿ ಸರ್ಕಾರಿ ಪ್ರೌಢಶಾಲೆಯಲ್ಲಿ ಅವರ ವಿದ್ಯಾಭ್ಯಾಸ ಮುಂದುವರೆಯಿತು. ಆಗಲೇ ಸ್ವಾತಂತ್ರ್ಯ ಚಳುವಳಿಯ ಭುಗಿಲೆದ್ದ ಪರಿಣಾಮ ಗೋಪಾಲಗೌಡರನ್ನು ಆಕರ್ಷಿಸಿತು. 1942ರಲ್ಲಿ ಹೈಸ್ಕೂಲ್ ಅಭ್ಯಾಸ ಮಾಡುತ್ತಿದ್ದ ಸಂದರ್ಭದಲ್ಲಿ ಕ್ವಿಟ್‌ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದ್ದರು. ಅನೇಕ ಬಾರಿ ಸೆರೆವಾಸ ಅನುಭವಿಸಿದರು. 1944ರಲ್ಲೇ ಶಿವಮೊಗ್ಗದ ಇಂಟರ್‌ಮಿಡಿಯೇಟ್ ಕಾಲೇಜುಸೇರಿದ ಅವರು ಸಾರ್ವಜನಿಕ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದರಿಂದ ವಿದ್ಯಾಭ್ಯಾಸವನ್ನು ಮುಂದುವರೆಸಲಾಗಲಿಲ್ಲ. ಬದುಕಿನ ಅನುಭವವೇ ಸಾಕಷ್ಟು ಪಾಠ ಕಲಿಸಿತು.

1948ರಲ್ಲೇ ಸಾಗರ ತಾಲ್ಲೂಕಿನಲ್ಲಿ ಮುರತ್ತೂರು ಗ್ರಾಮದಲ್ಲಿ ಬೃಹತ್ ರೈತ ಸಮಾವೇಶ ನಡೆದು ಅಂದೇ ಸಾಗರ ತಾಲ್ಲೂಕ್ ರೈತ ಸಂಘ ಅಸ್ತಿತ್ವಕ್ಕೆ ಬಂದಿತು. ಈ ಸಂಘಕ್ಕೆ ಡಿ.ಮೂಕಪ್ಪನವರು ಅಧ್ಯಕ್ಷರಾಗಿಯೂ, ಎಚ್.ಗಣಪತಿಯಪ್ಪನವರು ಪ್ರಧಾನ ಕಾರ್ಯದರ್ಶಿಯಾಗಿಯೂ ಆಯ್ಕೆಯಾದರು. ಈ ಸಂಘ ಗೇಣಿದಾರರ ಹಕ್ಕು ಬಾದ್ಯತೆಗಳನ್ನು ಕುರಿತು ಹೋರಾಟ ನಡೆಸುತ್ತಿತ್ತು. ಈ ಸಂಘ ವ್ಯವಸ್ಥೆ ಮಾಡಿದ ಸಭೆಗಳಲ್ಲಿ ದಿನಕರ ದೇಸಾಯಿ, ಕಡಿದಾಳ್‌ಮಂಜಪ್ಪ, ಎಸ್.ಗೋಪಾಲಗೌಡ, ಎಚ್.ಎಸ್.ಮಂಜಪ್ಪಗೌಡ,ಖಾದ್ರಿಶಾಮಣ್ಣ, ಜಿ.ಸದಾಶಿವರಾವ್, ವೈ.ಆರ್.ಪರಮೇಶ್ವರಪ್ಪಮೊದಲಾದ ಯುವ ಮುಂದಾಳುಗಳು ಭಾಗವಹಿಸಿ ಬೆಂಬಲಿಸಿ ಮಾತನಾಡಿದ್ದರು. ಗೋಪಾಲಗೌಡರ ಒತ್ತಾಸೆಯಿಂದಾಗಿ ರಾಜ್ಯ ಸಮಾಜವಾದಿ ಪಕ್ಷದ ಅಧ್ಯಕ್ಷರಾಗಿದ್ದ ಸಿ.ಜಿ.ಕೆ.ರೆಡ್ಡಿಯವರು ಗೃಹ ಸಚಿವರಿಗೆ ಕಾಗೋಡು ಸಮಸ್ಯೆ ಕುರಿತು ದೀರ್ಘ ಪತ್ರವೊಂದನ್ನು ಬರೆದರು.

1951ರಲ್ಲಿ ರಾಜ್ಯ ಸಮಾಜವಾದಿ ಪಕ್ಷ ಕಾಗೋಡು ಗೇಣಿ ರೈತರ ಹೋರಾಟಕ್ಕೆ ನೇರವಾಗಿ ಬೆಂಬಲ ಘೋಷಿಸಿತ್ತು. ಇದರ ಪರಿಣಾಮವಾಗಿ ಚಳವಳಿ ತೀವ್ರವಾಯಿತು. ಸತ್ಯಾಗ್ರಹಿಗಳು ಶಿವಮೊಗ್ಗ ಜಿಲ್ಲೆ ಮತ್ತು ಹೊರಗಿನಿಂದ ಬಂದು ಭಾಗವಹಿಸಿ ಗೇಣಿದಾರರನ್ನು ಭೂ ಒಡೆಯರು ಒಕ್ಕಲೆಬ್ಬಿಸುವುದನ್ನು ವಿರೋಧಿಸಿದರು.

ಸಮಾಜವಾದಿ ಪಕ್ಷ ಈ ಚಳವಳಿಯನ್ನು ಒಂದು ಮಾದರಿ ಹೋರಾಟವಾಗಿ ರೂಪುಗೊಳಿಸಿತು. 1951ರ ಜೂನ್ 14ರಂದು ಸಮಾಜವಾದಿ ಪಕ್ಷದ ರಾಷ್ಟ್ರೀಯ ಧುರೀಣ ರಾಮಮನೋಹರ ಲೋಹಿಯಾರವರು ಕಾಗೋಡಿಗೆ ಬಂದು ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಲೋಹಿಯಾರವರನ್ನು ಪೊಲೀಸರು ಬಂಧಿಸಿದರು. ಅವರೊಂದಿಗೆ ಖಾದ್ರಿಶಾಮಣ್ಣ, ಮುಲ್ಕಾ ಗೋವಿಂದರೆಡ್ಡಿ, ಈಶ್ವರಪ್ಪ, ಮೊದಲಾದವರು ಬಂಧಿತರಾದರು. ಚಳವಳಿಯ ಮುಖ್ಯ ಪ್ರೇರಣ ಶಕ್ತಿಯಾಗಿದ್ದ ಗೋಪಾಲಗೌಡರು ವಾರೆಂಟ್ ಆದೇಶದಿಂದ ತಪ್ಪಿಸಿಕೊಂಡು ಭೂಗತರಾಗಿ ಚಳುವಳಿಗೆ ಚಾಲನೆ ನೀಡುತ್ತಿದ್ದರು. ಗೋಪಾಲಗೌಡರನ್ನು ೧೯೫೧ ಜುಲೈ3 ರಂದು ಬಂಧಿಸಲಾಯಿತು. ಅದೇ ಸೆಪ್ಟೆಂಬರ್21ರಂದು ಜಯಪ್ರಕಾಶ್ ನಾರಾಯಣರು ಸಾಗರಕ್ಕೆ ಆಗಮಿಸಿ ಗೋಪಾಲ ಗೌಡರನ್ನು ಕಂಡು ಮಾತನಾಡಿಸಿ ಚಳವಳಿಗೆ ಹುರಿ ದುಂಬಿಸಿದ್ದರು.

ಈ ಸತ್ಯಾಗ್ರಹ ಇಡೀ ಮಲೆನಾಡಿನ ರೈತ ವರ್ಗದಲ್ಲಿ ಪ್ರಚಂಡ ರಾಜಕೀಯ ಜಾಗೃತಿ ಉಂಟುಮಾಡಿತು. ಗೋಪಾಲಗೌಡರು ಹಿಂದ್ ಕಿಸಾನ್ ಪಂಚಾಯಿತಿ ಕರ್ನಾಟ ಶಾಖೆಯ ಅಧ್ಯಕ್ಷರಾದರು. ಅವರು ತಮ್ಮ ಕಿರಿಯ ವಯಸ್ಸಿನಲ್ಲೇ ಹಿರಿಯದನ್ನು ಸಾಧಿಸಿದರು. ಜನಪ್ರಿಯತೆ ಅವರನ್ನು ಹಿಂಬಾಲಿಸಿತು. ಈ ಚಳವಳಿಯಿಂದ ಗೋಪಾಲಗೌಡರು ಒಬ್ಬ ಉತ್ತಮ ರಾಜಕೀಯ ನಾಯಕರಾಗಿ ಹೊರ ಹೊಮ್ಮಲು ಸಾಧ್ಯವಾಯಿತು.



# ಕಡಿದಾಳು ಮಂಜಪ್ಪನವರು

ತೀರ್ಥಹಳ್ಳಿಯಲ್ಲಿ ಜನಿಸಿದ ಕಡಿದಾಳ್ ಮಂಜಪ್ಪನವರು . ಕಾಂಗ್ರೆಸ್ ಪಕ್ಷದ ವರಿಷ್ಠರಲ್ಲೊಬ್ಬರು. ವಿದ್ಯಾರ್ಥಿ ದಿಸೆಯಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ವಾಸ ಅನುಭವಿಸಿದವರು. 1945ರಲ್ಲಿ ಮಲೆನಾಡು ಗೇಣಿ ರೈತ ಸಂಘ ಸ್ಥಾಪಿಸಿದವರು.

ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ತೀರ್ಥಹಳ್ಳಿ ಕ್ಷೇತ್ರದಿಂದ ಆಯ್ಕೆಯಾದ ಕಡಿದಾಳಮಂಜಪ್ಪನವರು 1945ರಲ್ಲಿ ಶಿವಮೊಗ್ಗ ಜಿಲ್ಲೆಯ ನ್ಯಾಯ ವಿದಾಯಕ ಸಭೆಗೆ ಆಯ್ಕೆಗೊಂಡವರು. ಪುನಃ 1952ರಲ್ಲಿ ತೀರ್ಥಹಳ್ಳಿ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆಗೊಂಡ ಕಡಿದಾಳರು ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಅವಧಿಯಲ್ಲಿ ಕಂದಾಯಮಂತ್ರಿಯಾಗಿ ಇನಾಂ ರದ್ದತಿ ಕಾಯ್ದೆ ರೆವಿನ್ಯೂ ಬೋರ್ಡ್ ರಚಿಸಿ ರೈತರ ಪರವಾದ ಹಿತಚಿಂತಕ ಮಂತ್ರಿ ಎಂದು ಹೆಸರು ಮಾಡಿದರು.

ಸಾಗರ ತಾಲ್ಲೂಕು ರೈತ ಸಂಘಕ್ಕೆ ಕಡಿದಾಳು ಮಂಜಪ್ಪನವರು ನಾಯಕರಾಗಿ ಮಾರ್ಗದರ್ಶನ ನೀಡುತ್ತಿದ್ದರು. ಸಾಗರ ತಾಲೂಕು ರೈತ ಸಂಘ ತೆಗೆದುಕೊಂಡ ಅನೇಕ ನಿರ್ಣಯಗಳಿಗೆ ಕಡಿದಾಳು ಮಂಜಪ್ಪನವರು ಯಾವುದೇ ರೀತಿಯ ಪರಿಹಾರ ಒದಗಿಸಲು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ ಅವರು ಕಾಂಗ್ರೆಸ್ ಪಕ್ಷದಲ್ಲಿ ಶಾಸಕರಾಗಿದ್ದ ಕಾರಣ ತಮ್ಮ ಸರ್ಕಾರದ ವಿರುದ್ಧ ತಿರುಗಿ ಬೀಳದ ಸ್ಥಿತಿಯಲ್ಲಿದ್ದರು. ಸಮಾಜವಾದಿ ಪಕ್ಷ ಮತ್ತು ರೈತ ಸಂಘಟನೆಗಳು ಹೋರಾಟದ ತೀವ್ರತೆಯ ಸಂದರ್ಭದಲ್ಲಿ ಯಾವುದೇ ಪ್ರತಿಕ್ರಿಯೆ ನೀಡಲಾಗದ ಸ್ಥಿತಿಯಲ್ಲಿದ್ದರು.

ಕಂದಾಯ ಮಂತ್ರಿಯಾಗಿದ್ದ ಇವರು ಅನೇಕ ರೈತರ ಪರವಾದ ನಿಲುವು ತಾಳಿ, ಮೈಸೂರು ಗೇಣಿ ಶಾಸನ, ಮೈಸೂರು ಇನಾಂ ರದ್ದತಿ ಪದ್ಧತಿಯನ್ನು 1961ರಲ್ಲಿ ಜಾರಿಗೆ ತಂದರು. ಕರ್ನಾಟಕ ಭೂಸುಧಾರಣಾ ಮಸೂದೆ ಅಂದಿನ ಕಾಲಕ್ಕೆ ಕ್ರಾಂತಿಕಾರ ಶಾಸನಗಳಾಗಿದ್ದು, ಕಡಿದಾಳು ಮಂಜಪ್ಪನವರು ರೈತರ ಪರ ಕಾನೂನು ತರಲು ತುಂಬಾ ಶ್ರಮಿಸಿದರು. ಅಪರೂಪದ ನಿಸ್ಪೃಹ ರಾಜಕಾರಣಿ ರೈತರ ಹಿತಚಿಂತಕ, ಕಡಿದಾಳು ಮಂಜಪ್ಪನವರು ತಮ್ಮ ನಿವೃತ್ತಿ ನಂತರವೂ ಹೈಕೋರ್ಟ್‌ನಲ್ಲಿ ವಕೀಲರಾಗಿ ವೃತ್ತಿಯನ್ನು ಪ್ರಾರಂಭಿಸಿದ ಅಪ್ಪಟ ಪ್ರಾಮಾಣಿಕ ವ್ಯಕ್ತಿ ಇವರಾಗಿದ್ದರು.



## ಗರುಡ ಶರ್ಮ

ಸರ್ವೋದಯ ಕಾರ್ಯಕರ್ತರಾಗಿ ವಿನೋಬಾ ಬಾವೆ ಅವರೊಂದಿಗೆ ಹದಿನೈದು ಇಪ್ಪತ್ತು ವರ್ಷಗಳಿಂದ ಆಶ್ರಮವಾಸ ಮಾಡಿ, ಭೂದಾನ ಚಳುವಳಿಯಲ್ಲಿ ಸಕ್ರಿಯಪಾತ್ರವಹಿಸಿದ್ದರು. ಗರುಡಶರ್ಮರು ಜಂಗಮ ಚಳುವಳಿಕಾರರು. ಇಡೀ ತಮ್ಮ ಜೀವನವನ್ನು ದೇಶಕ್ಕಾಗಿ ಮುಡಿಪಾಗಿಟ್ಟ ತ್ಯಾಗಜೀವಿ.

ಕಾಗೋಡು ಚಳವಳಿಯಲ್ಲಿ ಭೂಗತಸಂಘಟಕರಾಗಿ ರೈತರಿಗೆ ಸ್ಫೂರ್ತಿ ನೀಡುತ್ತ , ಧೈರ್ಯ ಹೇಳುತ್ತಾ ಚಳವಳಿಗೆ ಪ್ರೇರಕ ಶಕ್ತಿಯಾಗಿದ್ದವರು ಗರುಡಶರ್ಮರು. ಚಳವಳಿಯಲ್ಲಿ ಪೊಲೀಸರಿಗೆ ತಲೆ ಮರೆಸಿಕೊಂಡು , ಹೋರಾಟ ನಿರತ ರೈತ ನಾಯಕರಿಗೆ ಆಸರೆಯಾಗಿ , ಅವರ ಕಷ್ಟ ನೋವುಗಳಿಗೆ ಸ್ಪಂದಿಸಿ ಹೋರಾಟದ ಬೆನ್ನೆಲುಬಾಗಿದ್ದರು.

ಅಪ್ಪಟ ದೇಶಪ್ರೇಮಿ, ದೇಶ ಸೇವೆ ದೀನ ದಲಿತರ ಶ್ರೇಯೋಭಿವೃದ್ಧಿಗಾಗಿ ಜೀವ ಸವೆಸಿದ ಸಾಹಸಿಗ,ತನ್ನ ವ್ಯಕ್ತಿತ್ವದಲ್ಲಿ ಕಾಗೋಡು ಭೂ ಪ್ರದೇಶದ ಜನರ ಪ್ರೀತಿಗೆ ಪಾತ್ರರಾಗಿದ್ದ ಗರುಡಶರ್ಮರು ಈ ನಾಡುಕಂಡ ಅಪರೂಪದ ಹೋರಾಟಗಾರ.

ಕರ್ನಾಟಕದ ಮೂಲೆ ಮೂಲೆ ಸುತ್ತಿ ಬೌಗೋಳಿಕ ಪ್ರದೇಶಗಳನ್ನು ಕರಗತಮಾಡಿಕೊಂಡಿರುವ ಇವರು ,ದೇಶಕ್ಕಾಗಿ ದೀನ ದಲಿತರ ನೊಂದವರ ಬಾಳಿಗೆ ಆಶಾಕಿರಣ ಮೂರ್ತಿಯಾಗಿದ್ದವರು. ಪ್ರಸ್ತುತ ಬೆಂಗಳೂರಿನ ಶೇಷಾದ್ರಿಪುರಂನಲ್ಲಿರುವ ಗಾಂಧಿ ಭವನದಲ್ಲಿ ಸದ್ಯದ ವಾಸ್ತವ್ಯ ಮಾಡಿದ್ದಾರೆ.

## ಸದಾಶಿವರಾಯರು

ಭೂಮಾಲೀಕರಾದ ಸದಾಶಿವರಾಯರು ಬೇರೊಂದು ಹಾದಿಯನ್ನೇ ತಮ್ಮ ಬದುಕಿನುದ್ದಕ್ಕೂ ಸವೆಸಿದ ಅಪ್ಪಟ ಸಮಾಜವಾದಿ ಜೀವ. ಭೂಮಾಲಿಕತ್ವದ ವ್ಯವಸ್ಥೆಯೊಳಗಿದ್ದು ಭಿನ್ನವಾದ ಹಾದಿಯನ್ನೇ ತುಳಿದು ಆದರ್ಶಪ್ರಾಯ ಸೈದ್ಧಾಂತಿಕ ವ್ಯಕ್ತಿತ್ವವಾಗಿ ಉಳಿದವರು.

ತೀರ್ಥಹಳ್ಳಿ ತಾಲ್ಲೂಕಿನವರಾದ ಸದಾಶಿವರಾಯರು, ಬಾಲ್ಯದಿಂದಲೇ ಗಾಂಧೀಜಿ, ಸಮಾಜವಾದಿ ಚಿಂತಕ ಡಾ.ರಾಮಮನೋಹರಲೋಹಿಯಾರವರ ಚಿಂತನೆ,ಜಯಪ್ರಕಾಶನಾರಾಯಣ ಅವರುಗಳ ವೈಚಾರಿಕ ನೆಲೆಗಟ್ಟನ್ನು ಸಾದ್ಯಂತವಾಗಿ ಅರ್ಥೈಸಿಕೊಂಡು ಪ್ರಭಾವಕ್ಕೊಳಗಾಗಿ ಸದಾಶಿವರಾಯರು ಬೆಳೆದವರು. ಭೂಮಾಲೀಕತ್ವದ ಧಾಷ್ಟ್ರ್ಯತೆಯನ್ನು ಹೊಂದಿದ್ದರು. ದೀನ ದಲಿತರ ಏಳಿಗೆಗಾಗಿ ಶ್ರಮಿಸಲು, ತನಗಿದ್ದ ಭೂಮಿಯನ್ನು (300 ಎಕರೆ) ರೈತರಿಗೆ ದಾನ ಮಾಡಿದರು.

"ಉಳುವವನೆ ನೆಲದೊಡೆಯ" ಎಂಬ ಕಾಗೋಡು ಚಳವಳಿಯ ಘೋಷಣೆಗೆ ಬದ್ಧರಾಗಿ ಸ್ವತಃ ಕಾಗೋಡು ಚಳವಳಿಯಲ್ಲಿ ಭಾಗಿಯಾಗಿ ಪೊಲೀಸರಿಂದ ಬಂಧಿಯಾಗಿದ್ದವರು.

ಸಾಮಾಜಿಕ ನ್ಯಾಯದ ಮುಂಚೂಣಿ ನಾಯಕ ಸದಾಶಿವರಾಯರು. ಗೋಪಾಲಗೌಡರ ಬೆಳವಣಿಗೆಯಲ್ಲಿ ಸದಾಶಿವರಾಯರ ಪಾತ್ರ ಪ್ರಮುಖವಾಗಿತ್ತು. ಸಾಗರ ಹೊಸನಗರ, ತೀರ್ಥಹಳ್ಳಿಯ ಪ್ರದೇಶಗಳಲ್ಲಿ ರೈತರಿಗೆ ಆಗುತ್ತಿದ್ದ ಅನ್ಯಾಯ ಕುರಿತಂತೆ ಜಾಗೃತಿ ಮೂಡಿಸುತ್ತಿದ್ದ ಅಪರೂಪ ನಾಯಕರಲ್ಲಿ ಇವರು ಒಬ್ಬರಾಗಿದ್ದರು.

## ವೈ.ಆರ್.ಪರಮೇಶ್ವರಪ್ಪ

ಸ್ವಾತಂತ್ರ್ಯ ಚಳುವಳಿಯ ಹೋರಾಟಗಾರ ವೈ.ಆರ್.ಪರಮೇಶ್ವರಪ್ಪನವರು, ಬ್ರಿಟಿಷರ ವಿರುದ್ಧ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದ್ದವರು. ಶಿವಮೊಗ್ಗ ಜಿಲ್ಲೆಯಲ್ಲಿ ಸಮಾಜವಾದಿ ಪಕ್ಷ ಭದ್ರವಾಗಿ ನಲೆಯೂರುವಂತೆ ಮಾಡಿದ ಕೀರ್ತಿ ವೈ.ಆರ್.ಪರಮೇಶ್ವರಪ್ಪನವರಿಗೆ ಸಲ್ಲುತ್ತದೆ. ಸಮಾಜವಾದಿ ಸಂಗಾತಿಯಾದ ಇವರನ್ನು ಅಣ್ಣಯ್ಯ ಎಂದೇ ಸಂಭೋದಿಸುವುದು ವಾಡಿಕೆ. ಕರ್ನಾಟಕ ಸಮಾಜವಾದಿ ಪಕ್ಷ ರಾಜ್ಯದಲ್ಲಿ ನೆಲೆಯೂರಲು ಇವರೂ ಸಹ ಮೂಲ ಕಾರಣಕರ್ತರು.

1942-46ರ ಅವಧಿಯಲ್ಲಿ ಸಹಕಾರ ಚಳವಳಿಯ ಹರಿಕಾರರಾಗಿ ದುಡಿದ ಜೀವ. ಹಳೆ ಮೈಸೂರಿನಲ್ಲಿ ವಿದ್ಯಾರ್ಥಿಕಾಂಗ್ರೆಸ್ ಸ್ಥಾಪಿಸಿ, ಯುವಕರ ಮನಸ್ಸನ್ನು ಗೆದ್ದಿದ್ದವರು. ಶಿವಮೊಗ್ಗ ನಗರದ ಅಧ್ಯಕ್ಷರಾಗಿ, ವಿಧಾನಪರಿಷತ್‌ಸದಸ್ಯರಾಗಿ, ಸೇವೆ ಸಲ್ಲಿಸಿದ್ದಾರೆ.

ಕಾಗೋಡು ಸತ್ಯಾಗ್ರಹದಲ್ಲಿ ಇವರದು ಅಚ್ಚಳಿಯದ ಸಹಾಯ ಹಸ್ತ. ಸ್ವತಃ ಚಳವಳಿಯಲ್ಲಿ ಭಾಗವಹಿಸಿ ಚಳವಳಿ ಯಶಸ್ವಾಗುವಂತೆ ನೋಡಿಕೊಂಡವರಲ್ಲಿ ಅಣ್ಣಯ್ಯನವರ ಪಾತ್ರ ಹಿರಿದು. ಚಳವಳಿ ಕಾವು ಆರುವ ಹಂತದಲ್ಲಿದ್ದಾಗ ಹುರುಪು ತುಂಬಿ ಚಳವಳಿಗೆ ಗೋಪಾಲಗೌಡರು ಮತ್ತು ಅಣ್ಣಯ್ಯನವರು ಶಕ್ತಿತುಂಬಿದವರು.

## ಡಿ.ಮೂಕಪ್ಪ

ಮುರತ್ತೂರಿನ ದುರ್ಗಪ್ಪ ಮತ್ತು ಈರಮ್ಮ ದಂಪತಿಗಳ ಮೊದಲ ಪುತ್ರನಾಗಿ ಡಿ.ಮೂಕಪ್ಪನವರು ಜನಿಸಿದರು. ಆಗಿನ ಕಾಲಕ್ಕೆ ದೀವರಲ್ಲಿ ಎಲ್.ಎಸ್. ಪಾಸು ಮಾಡಿದ ವ್ಯಕ್ತಿ ಮೂಕಪ್ಪನವರು ಒಬ್ಬರೇ.1946 ರಲ್ಲಿ ನಡೆದ ಸಾಗರ ತಾಲೂಕಿನ ಮನೆಘಟ್ಟಪುರದಲ್ಲಿ ನಡೆದ ಸಾಮಾಜಿಕ ಸುಧಾರಣಾ ಸಭೆಯಲ್ಲಿ ಭಾಗವಹಿಸಿದಂದಿನಿಂದ ಸಾರ್ವಜನಿಕ ಬದುಕನ್ನು ಆರಂಭಿಸಿದ, ಇವರು ಮುರತ್ತೂರಿನಲ್ಲಿ

ಬೆಂಕಿ ಅನಾಹುತ ಸಂದರ್ಭದಲ್ಲಿ ಸಂತ್ರಸ್ತರ ಕುಟುಂಬಗಳಿಗೆ ನೆರವು ನೀಡಿದ್ದರು.ಕಾನ್ಲೆಯಲ್ಲಿ ನಡೆದ ರೈತಸಭೆಯಲ್ಲಿ ಡಿ.ಮೂಕಪ್ಪನವರು ಭಾಗವಹಿಸಿದ್ದರು.

ಮುರತ್ತೂರಿನ ತಮ್ಮ ಮನೆಯಲ್ಲಿಯೇ ಶ್ರೀ ಆಂಜನೇಯ ಕೋ ಅಪರೇಟಿವ್ ಸೊಸೈಟಿಯನ್ನು ಪ್ರಾರಂಭಿಸಿದ್ದರು.ಕೆಲವು ದಿನಗಳ ಕಾಲ ವ್ಯವಸಾಯ ಫೀಲ್ಡ್‌ಮನ್ ಆಗಿ ಸೇವೆ ಸಲ್ಲಿಸಿದ್ದರು.1947 ರಲ್ಲಿ ಜಿಲ್ಲಾ ಬೋರ್ಡ್ ಸದಸ್ಯ ಸ್ಥಾನಕ್ಕೆ ಆಯ್ಕೆಯಾಗಿದ್ದರು.

ಸಾಗರ ತಾಲ್ಲೂಕು ರೈತ ಸಂಘದ ಅಧ್ಯಕ್ಷರಾಗಿ 1948ರಲ್ಲಿ ಆಯ್ಕೆಗೊಂಡಿದ್ದರು. ಡಿ.ಮೂಕಪ್ಪನವರು ಮೊದಲಿನಿಂದಲೂ ಕಾಂಗ್ರೆಸ್ ಬೆಂಬಲಿಗರಾಗಿದ್ದರು. ಇವರ ವ್ಯಕ್ತಿತ್ವ ಜನಪರ ಕೆಲಸಗಳಿಗೆ ಸದಾ ತೆರೆದ ಹೃದಯವಾಗಿತ್ತು.ಸಾಗರ ತಾಲೂಕಿನ ಸುತ್ತಮುತ್ತ ಊರುಗಳಲ್ಲಿ ರೈತರ ಸಭೆ ನಡೆಸಿ ರೈತರನ್ನು ಸಂಘಟಿಸುವುದು ಅವರಿಗೆ ಜಾಗೃತಿ ಮೂಡಿಸುವ ಕಾರ್ಯದಲ್ಲಿ ತೊಡಗಿರುತ್ತಿದ್ದರು.

ರೈತ ಸಂಘದವತಿಯಿಂದ ಕಾಗೋಡು ಚಳವಳಿಯಲ್ಲಿ ಇವರದು ಸಕ್ರಿಯ ಪಾತ್ರ, ಕಾಗೋಡು ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ರೈತರನ್ನು ಸಂಘಟಿಸಿ, ಕಾಗೋಡು ಚಳವಳಿ ಯಶಸ್ವಿಯಾಗುವಂತೆ ನೋಡಿಕೊಂಡವರು. ಇವರನ್ನು ಡಾ.ರಾಮಮನೋಹರ ಲೋಹಿಯಾರ ಜೊತೆಯಲ್ಲಿ ಪೊಲೀಸರು ಬಂಧಿಸಿದ್ದರು.

ಜನಪರ ಕಾಳಜಿಯುಳ್ಳ ಡಿ.ಮೂಕಪ್ಪನವರು ಶಾಸನ ಸಭೆಗೆ ಎರಡು ಬಾರಿ ಗೆದ್ದು ಎರಡು ಅವಧಿಗೆ ಸದಸ್ಯರಾಗಿ ನಾಡಿನ ಸೇವೆ ಸಲ್ಲಿಸಿದ್ದಾರೆ.

## ಎನ್.ಕೆ.ಸೀತಾರಾಮಯ್ಯಂಗಾರ್

ಪತ್ರಕರ್ತ ಎನ್.ಕೆ.ಸೀತಾರಾಮಯ್ಯಂಗಾರ್ ಅವರು ಧೀರ ವ್ಯಕ್ತಿತ್ವವುಳ್ಳವರು. ಜಾಗೃತಿ ದಿನ ಪತ್ರಿಕೆಯ ಸಂಪಾದಕರಾಗಿ ಕೆಲಸಮಾಡುತ್ತಿದ್ದ ಇವರು, ಮೊದಲಿಗೆ ಬ್ರೂಕ್ ಬಾಂಡ್ ಟೀ ಏಜೆಂಟರಾಗಿಯೂ ಕೆಲವು ದಿನಗಳ ಕಾಲ ಕೆಲಸ ಮಾಡಿದ್ದರು.

ಜಾಗೃತಿ ದಿನಪತ್ರಿಕೆ ಶೋಷಿತ ವರ್ಗದ ಮುಖವಾಣಿಯಾಗಿಸಿಕೊಂಡು, ಉಳ್ಳವರ ದೌರ್ಜನ್ಯವನ್ನು ಖಂಡಿಸುವ ಶಕ್ತಿಯಾಗಿ ಪತ್ರಿಕೆ ರೂಪಗೊಂಡಿತ್ತು. ಕಾಂಗ್ರೆಸ್ ಪಕ್ಷ ಭ್ರಷ್ಟಾಚಾರವನ್ನು ಬಯಲಿಗೆಳೆಯಲು ಪತ್ರಿಕೆ ಯಾವ ರೀತಿಯಲ್ಲೂ ಹಿಂಜರಿಯಲಿಲ್ಲ.

ಸಮಾಜವಾದಿ ಸಂಗಾತಿಗಳ ಪ್ರಭಾವ ವಲಯ ಸೇರಿದ ಅಯ್ಯಂಗಾರ್‌ರವರು ಸಮಾಜವಾದಿ ಪಕ್ಷದ ಬೆಂಬವಾಗಿ ಕೆಲಸ ಮಾಡುತ್ತಿದ್ದರು. ಕಾಗೋಡು ಸತ್ಯಾಗ್ರಹದಲ್ಲಿ ಅನೇಕ ಬಾರಿ ಪೊಲೀಸರಿಗೆ ಕೈಗೆ ಸಿಗದೆ ಭೂಗತರಾಗಿ ಚಳವಳಿಗೆ ಪ್ರೇರಕ ಶಕ್ತಿಯಾಗಿದ್ದವರು.

## ಹೆಚ್.ಹೆಚ್.ಮಂಜಪ್ಪಗೌಡ

ತೀರ್ಥಹಳ್ಳಿಯ ಹೆಚ್.ಹೆಚ್.ಮಂಜಪ್ಪಗೌಡರು ಶಿವಮೊಗ್ಗ ಜಿಲ್ಲೆಯ ಭಾಗಕ್ಕೆ ಇವರು ಚಿರಪರಿಚಿತರು. ಸಾರ್ವಜನಿಕ ಬದುಕಿಗಾಗಿ ತಮ್ಮನ್ನುತಾವು ಸಮರ್ಪಿಸಿಕೊಂಡಿದ್ದ ಇವರು ತಮ್ಮ ಇಳಿವಯಸ್ಸಿನಲ್ಲೂ ಚುರುಕಾಗಿ ಓಡಾಡುತ್ತಾ ಸಮಾಜ ಸೇವಾ ಕಾರ್ಯದಲ್ಲಿ ನಿರತರಾಗಿದ್ದರು.ತೀರ್ಥಹಳ್ಳಿಯ ತಾಲ್ಲೂಕ್ ಬೋರ್ಡ್ ಅಧ್ಯಕ್ಷರಾಗಿದ್ದಾಗ ಅವರು ವಹಿಸಿದ ಸಾರ್ವಜನಿಕ ಕಾಳಜಿ ಇನ್ನೂ ಜನಮನದಲ್ಲಿ ಅಚ್ಚಹಸುರಾಗಿ ಉಳಿದಿದೆ.

ಮಂಜಪ್ಪಗೌಡರು ಹೆದ್ದೂರು ಗ್ರಾಮಪಂಚಾಯ್ತಿ ಅಧ್ಯಕ್ಷರಾಗಿ,ವ್ಯವಸಾಯ ಸೇವಾ ಸಹಕಾರ ಸಂಘದ ಸಂಸ್ಥಾಪಕ ಅಧ್ಯಕ್ಷರಾಗಿ,ಜಿಲ್ಲಾ ಜೇನು ಸಹಕಾರ ಸಂಘದ ಅಧ್ಯಕ್ಷರಾಗಿ, ಶಿವಮೊಗ್ಗ ಜಿಲ್ಲಾ ವ್ಯವಸಾಯೋತ್ಪನ್ನ ಮಾರುಕಟ್ಟೆಯ ಸ್ಥಾಪಕ ಸದಸ್ಯರಾಗಿ, ಉಪಾಧ್ಯಕ್ಷರಾಗಿ,ತೀರ್ಥಹಳ್ಳಿ ತಾಲ್ಲೂಕು ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ,ಅಧ್ಯಕ್ಷರಾಗಿ,ತೀರ್ಥಹಳ್ಳಿ ತಾಲ್ಲೂಕು ಮತ್ತು ಶಿವಮೊಗ್ಗ ಜಿಲ್ಲಾ ಕಿಸಾನ್ ಸೆಲ್‌ನ ಅಧ್ಯಕ್ಷರಾಗಿ ಭೂನ್ಯಾಯಮಂಡಳಿ ಹಾಗೂ ರಾಜ್ಯಖಾದಿ ಮಂಡಳಿ ನಾಮಕರಣ ಸದಸ್ಯರಾಗಿ, ಹಲವಾರು ಪದವಿ ಹುದ್ದೆಗಳಲ್ಲಿ ಸಾರ್ವಜನಿಕ ಸೇವೆ ಸಲ್ಲಿಸಿದ್ದಾರೆ.

ಮಂಜಪ್ಪಗೌಡರು ಭೂಸುಧಾರಣೆ ಚಳವಳಿ, ಗೇಣಿದಾರರ ಪರ ಚಳವಳಿ ಹಾಗೂ ಕಾಗೋಡು ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು.

೧೯೫೦ರಲ್ಲಿ ಶಿರೆವಂತೆ ಗ್ರಾಮದಲ್ಲಿ ಸೇರಿದ್ದ ರೈತರ ಬೃಹತ್ ಸಭೆಯಲ್ಲಿ ಭಾಗವಹಿಸಿ ಭೂಮಾಲಿಕರು ಗೇಣಿರೈತರು ತಾವು ಬೆಳೆದ ಬೆಳೆಯನ್ನು ಗೇಣಿ ರೂಪದಲ್ಲಿ ನೀಡುವಾಗ ಆಗುತ್ತಿದ್ದ ಅಳತೆಯ ಮೋಸದ ಬಗ್ಗೆ , ಮೋಸ ದೌರ್ಜನ್ಯಗಳ ಬಗ್ಗೆ ಕಣ್ಣಿಗೆ ಕಟ್ಟುವಂತೆ ಸಭೆಯಲ್ಲಿ ವ್ಯಕ್ತಗೊಳಿಸಿ ರೈತರಲ್ಲಿ ಜಾಗೃತಿಯನ್ನು ಉಂಟುಮಾಡುತ್ತಿದ್ದರು. ಕಾಗೋಡು ಸತ್ಯಾಗ್ರಹದಲ್ಲೂ ಇವರು ಸಹ ಭಾಗವಹಿಸಿದವರಲ್ಲಿ ಇವರು ಒಬ್ಬರಾಗಿದ್ದರು.

## ಹಿರೇನಲ್ಲೂರಿನ ಬರಸಿನ ದ್ಯಾವಪ್ಪ

ಬರಸಿನ ದ್ಯಾವಪ್ಪನವರದು ಕಾಗೋಡು ಚಳವಳಿಯಲ್ಲಿ ಸಕ್ರಿಯವಾದ ಪಾತ್ರವಾಗಿತ್ತು. ಹಿರೇನಲ್ಲೂರಿನ ಬಹು ದೊಡ್ಡ ಕುಟುಂಬ ಇವರದಾಗಿತ್ತು. ಇವರ ಕುಟುಂಬವೊಂದರಲ್ಲಿ ೭೫ ಮಂದಿ ವಾಸವಾಗಿದ್ದರು. ಈ ಕುಟುಂಬ ಹಿರಿಯ ವ್ಯಕ್ತಿಯಾಗಿದ್ದ ಬರಸಿನ ದ್ಯಾವಪ್ಪನವರು. ಅವಿದ್ಯಾವಂತನಾದರೂ ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು.

ಆಗಿನ ದಿನಗಳಲ್ಲಿ ಹೋರಾಟಗಾರ ದಿನಕರ ದೇಸಾಯಿಯವರ ಭಾಷಣಗಳಿಂದ ಪ್ರಭಾವಿತರಾಗಿದ್ದ ಇವರು ಸ್ವಾತಂತ್ರ್ಯ ಹೋರಾಟಗಳಲ್ಲಿ ತೊಡಗಿಸಿಕೊಳ್ಳಲು ಹಿಂದೆಮುಂದೆ ನೋಡದ ವ್ಯಕ್ತಿ ಇವರಾಗಿದ್ದರು. ಹೀಗಾಗಿ ಜೈಲುವಾಸವನ್ನು ಅನುಭವಿಸಿಬಂದವರಾಗಿದ್ದರು.

ಇದೇ ವೇಳೆಗೆ ಸ್ವಾತಂತ್ರ್ಯ ಹೋರಾಟಗಾರ ಗಣಪತಿಯಪ್ಪನವರು ಕುಂದಾಪುರದಿಂದ ವಲಸೆ ಬಂದು ಹಿರೇನಲ್ಲೂರಿನಲ್ಲಿ ನೆಲೆಯೂರಲು ಅವಕಾಶ ಮಾಡಿಕೊಟ್ಟವರು. ಬರಸಿನದ್ಯಾವಪ್ಪನವರು. ಯುವಕ ಗಣಪತಿಯಪ್ಪನವರಿಗೆ ಬರಸಿನ ದ್ಯಾವಪ್ಪನವರು ತಮ್ಮ ಊರಿನಲ್ಲಿ ಮಕ್ಕಳಿಗೆ ಶಾಲೆ ನಡೆಸುವಂತೆ ಅವಕಾಶ ಮಾಡಿಕೊಟ್ಟು, ತಮ್ಮ ಮನೆಯಲ್ಲಿ ವಾಸ್ತವ್ಯಮಾಡಲು ಅನುಕೂಲ ಮಾಡಿಕೊಟ್ಟರು. ತಮ್ಮ ಜನಾಂಗದವರು ವಿದ್ಯಾವಂತರಾಗಬೇಕೆಂಬ ಕಾಳಜಿಹೊಂದಿದ್ದ, ದ್ಯಾವಪ್ಪನವರು ಕಾಗೋಡು ಚಳವಳಿಯ ಪ್ರೇರಕ ಶಕ್ತಿಯಾಗಿದ್ದರು.

ಸ್ವಾಭಿಮಾನಿ ಗಣಪತಿಯಪ್ಪನವರಿಗೆ ಒಡೆಯರು ಕತ್ತಿ ಮಸೆಯುತ್ತಿದ್ದರು ಇವರ ರಕ್ಷಣೆಗೆ ಬರಸಿನ ದ್ಯಾವಪ್ಪ ಸದಾ ಸಿದ್ಧರಾಗುತ್ತಿದ್ದರು. ಒಮ್ಮೆ ದೇವಸ್ಥಾನದ ವಿಚಾರದಲ್ಲಿ ವಂತಿಗೆ ಎತ್ತಿ ವೀರಶೈವಮಂಡಳಿ ಎಂದು ಆಹ್ವಾನಪತ್ರಿಕೆಯಲ್ಲಿ ಮುದ್ರಿಸಿದ್ದು ಸ್ವಾಭಿಮಾನ ಕೆರಳಿ ಊರಿನ ಜನ ರನ್ನು ಸಂಘಟಿಸಿ ದೀವರ ಮಂಡಳಿ ಎಂದು ಮುದ್ರಿಸಿ ತಮ್ಮ ಜನಾಂಗದವರಿಗೆಲ್ಲಾ ಹಂಚಿದ ಸಂಗತಿ ಸ್ವಾಭಿಮಾನದ ಸಂಗತಿಯಾಗಿತ್ತು.

ಅಂದಿನ ಭೂಮಾಲೀಕರು ಗೇಣಿ ರೈತರಿ ಮಾಡುತ್ತಿದ್ದ ಅನ್ಯಾಯ, ಕೊಳಗದ ಅಳತೆಯಲ್ಲಿ ಆಗುತ್ತಿದ್ದ ಮೋಸದ ಬಗ್ಗೆ ರೈತರಿಗೆ ಅರಿವು ಮೂಡಿಸುವಾಗ ದ್ಯಾವಪ್ಪನವರು ಸದಾ ಗಣಪತಿಯಪ್ಪನವರ ಬೆನ್ನಿಗಿರುತ್ತಿದ್ದರು.

ಊರಿನ ಸಮಾಜವಾದಿ ಚಳವಳಿಕಾರರು ರೈತರ ಸಭೆಯ ನಡೆಸಲು ಆಗಮಿಸಿದರೆ ಅದರ ವ್ಯವಸ್ಥೆಗೆ ಮುಂದಾಳತ್ವ ವಹಿಸಿ ರೈತರ ಚಳವಳಿಯನ್ನು ಜೀವಂತವಾಗಿಡಲು ಸಾಕಷ್ಟು ಎಚ್ಚರ ವಹಿಸುತ್ತಿದ್ದರು. ಪೊಲೀಸರ ಕೈಗೆ ಸಿಗದೆ ಭೂಗತರಾಗಿಯೂ ಅನೇಕ ಬಾರಿ ಕಾರ್ಯನಿರ್ವಹಿಸಿದ್ದುಂಟು.ಆದರೆ ಷರಿಫ್‌ಬುಡನ್ ಸಾಬ್ ವೆಂಬ ಸಬ್‌ಇನ್ಸ್ ಪೆಕ್ಟರ್ ಬಂಧಿಸಿ ಕಾನ್ಲೆ ರೈಲ್ವೆ ನಿಲ್ದಾಣದಲ್ಲಿ ಅವಮಾನುಷವಾಗಿ, ಚಿತ್ರಹಿಂಸೆಯು ಕೊಟ್ಟಿದ್ದನ್ನು ತೀವ್ರವಾಗಿ ಗಣಪತಿಯಪ್ಪನವರು ಖಂಡಿಸುತ್ತಾರೆ.ಗೋಪಾಲಗೌಡರಿಗೆ ಆತ್ಮೀಯರಾಗಿದ್ದ ದ್ಯಾವಪ್ಪನವರು ಗೌಡರ ಭಾಷಣಕ್ಕೆ ಎಲ್ಲಿದ್ದರೂ ಸಿದ್ಧರಾಗಿ ನಿಲ್ಲುತ್ತಿದ್ದರು.

ವಯೋವೃದ್ಧರಾಗಿರುವ ದ್ಯಾವಪ್ಪನವರು ತಮ್ಮ ಕೊನೆಯ ದಿನಗಳನ್ನು ತಮ್ಮ ಮನೆಯಲ್ಲಿ ಕಳೆಯುತ್ತಿದ್ದಾರೆ.

## ಕಾಗೋಡು ದೊಡ್ಮನೆಯ ಸವಾಜಿ ಬೀರನಾಯ್ಕರು

ಕಾಗೋಡಿಗೆ ದೊಡ್ಡಕುಟುಂಬವಾಗಿದ್ದ ಇವರ ಮನೆತನ ದೊಡ್ಮನೆ ಸವಾಜಿ ಮನೆತನ ಎಂದೇ ಕರೆಯುವುದು ಇಲ್ಲಿನ ರೂಢಿಯಾಗಿತ್ತು. ಈ ಮನೆಯ ಯಜಮಾನರಾಗಿದ್ದ ಬೀರನಾಯ್ಕರು ಚಳವಳಿಯ ಪ್ರೇರಕಶಕ್ತಿಯಾಗಿದ್ದರು.

ಸಾಗರ ತಾಲ್ಲೂಕು ರೈತ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದ ಬೀರನಾಯ್ಕರು ಚಳವಳಿಯ ಆರಂಭದಲ್ಲಿ ರೈತರು ಮತ್ತು ಒಡೆಯರ ನಡುವೆ ಸಂಧಾನ ಏರ್ಪಡಿಸಲು ಸಾಕಷ್ಟು ಬಾರಿ ಯತ್ನಿಸಿದರು. ಆದರೆ ಫಲಕೊಡದೆ ವಿಫಲವಾದಾಗ ತಾವು ಸತ್ಯಾಗ್ರಹದಲ್ಲಿ ಭಾಗವಹಿಸಿ ಬೆಂಬಲ ಹಾಗೂ ಸಹಕಾರ ನೀಡಿ ಚಳವಳಿಯನ್ನು ಪ್ರೋತ್ಸಾಹಿಸಿದವರಲ್ಲಿ ಬೀರನಾಯ್ಕರು ಪ್ರಮುಖರು.

ಇವರ ಮನೆ ಚಳವಳಿಯ ಕೇಂದ್ರಬಿಂದುವಾಗಿತ್ತು. ಬೀರನಾಯ್ಕರಿಗೆ ಮೂರು ಮಂದಿಗಂಡು ಮಕ್ಕಳಿದ್ದು, ಇಬ್ಬರು ಹೆಣ್ಣುಮಕ್ಕಳು ಇವರಲ್ಲಿ ಹಿರಿಯವ ಕನ್ನಪ್ಪನವರು, ಎರಡನೆಯವರು ಹುಚ್ಚಪ್ಪನವರು, ಕಾಗೋಡು ತಿಮ್ಮಪ್ಪನವರು ಮೂರನೆಯವರು.ಮೈಲಮ್ಮ ಮತ್ತು ದೇವಮ್ಮ ಕಾಗೋಡು ತಿಮ್ಮಪ್ಪನವರ ಅಕ್ಕಂದಿರು.

ಕಾಗೋಡು ಚಳವಳಿಯಲ್ಲಿ ರೈತ ನಾಯಕರು, ಸಮಾಜವಾದಿಗಳು ಆಗಮಿಸಿದರೆ ಅವರು ಉಳಿದುಕೊಳ್ಳುತ್ತಿದ್ದ ಕಾಗೋಡಿನ ಬೀರನಾಯ್ಕರ ಮನೆಯಲ್ಲಿಯೇ. ಕಾಗೋಡು ತಿಮ್ಮಪ್ಪನವರನ್ನು ಉನ್ನತ ವಿದ್ಯಾಭ್ಯಾಸ ಮಾಡಿಸಿದ ಕೀರ್ತಿ ಬೀರನಾಯ್ಕರಿಗೆ ಸಲ್ಲುತ್ತದೆ. ಗೇಣಿ ರೈತ ಕುಟುಂಬದಲ್ಲಿ ಬೆಳೆದ ವ್ಯಕ್ತಿಯೊಬ್ಬ ಕಾನೂನುಪದವಿ ಪಡೆದು ರಾಜಕೀಯದಲ್ಲಿ ಉನ್ನತ ಮಟ್ಟಕ್ಕೇರುವಂತೆ ಮಾಡಿದ ಕೀರ್ತಿ ಇವರ ಮನೆತನಕ್ಕೆ ಸೇರುತ್ತದೆ. ಕಾಗೋಡಿನ ಕುಡಿ ರಾಜಕೀಯದಲ್ಲಿ ಧ್ರುವತಾರೆಯಾಗಿ ಮಿನುಗುವಂತೆ ಮಾಡಿದ ಕೀರ್ತಿ ಕಾಗೋಡಿನ ಮಣ್ಣಿಗೆ ಸೇರುತ್ತದೆ. ಕಾಗೋಡು ತಿಮ್ಮಪ್ಪನವರು ಭೂಸುಧಾರಣಾ ಕಾಯ್ದೆ ಸಮಿತಿಯ ಸದಸ್ಯರಾಗಿ, ಮಹತ್ತರ ಭೂಸುಧಾರಣಾ ಕಾಯ್ದೆ ತರಲು ಸಾಕಷ್ಟು ಶ್ರಮವಹಿಸಿ ಚಳವಳಿಯನ್ನು ಸಾಕಾರಗೊಳಿಸಲು ಕಾರಣರಾಗಿದ್ದಾರೆ.ಕಾಗೋಡು ಚಳವಳಿಗೆ ಬೀರನಾಯ್ಕರ ಕುಟುಂಬದಿಂದ ದೊರೆತ ಬೆಂಬಲ ಅಪಾರವಾದುದು.

## ಸಿ.ಜಿ.ಕೆ.ರೆಡ್ಡಿ

ಎರಡನೇ ಮಹಾಯುದ್ಧದ ಸಮಯಕ್ಕೆ ಯುವಕ ಸಿ.ಜಿ.ಕೆ.ರೆಡ್ಡಿ ಭಾರತದ ನೌಕಾದಳದಲ್ಲಿ ಅಧಿಕಾರಿಯಾಗಿದ್ದವರು. ಬರ್ಮಾಸಿಂಗಾಪೂರ್‌ಗಳಲ್ಲಿ ಯುದ್ಧ ಕಾಲದಲ್ಲಿ ಸಮುದ್ರಯಾನ ಮಾಡಿ

ನೇತಾಜಿ ಸುಭಾಷ್‌ಚಂದ್ರಬೋಸ್‌ರು ಬರ್ಮಾದಲ್ಲಿ, ಭಾರತದ ಸ್ವಾತಂತ್ರ್ಯ ಸರ್ಕಾರವನ್ನು ಘೋಷಿಸಿದ್ದರು. ಬ್ರಿಟಿಷ್ ಸೈನ್ಯದಲ್ಲಿದ್ದ ಭಾರತೀಯ ಸೈನಿಕರು, ನೇತಾಜಿಯವರ ಇಂಡಿಯನ್ ನ್ಯಾಷನಲ್ ಆರ್ಮಿಗೆ ಸೇರಿ ಬ್ರಿಟಿಷರ ಮೇಲೆ ತಿರುಗಿ ಬಿದ್ದರು. ಈ ಸಮಯದಲ್ಲಿಯೇ ಅಲ್ಲಿಗೆ ಹೋಗಿದ್ದ ನೌಕಾಪಡೆಯ ತರುಣ ಅಧಿಕಾರಿ ರೆಡ್ಡಿಯವರು ಸೇನೆಯೊಡನೆ ಸೇರಿ ಸುಭಾಷ್ ಚಂದ್ರಬೋಸರ ನಿಕಟವರ್ತಿಗಳಲ್ಲಿ ಒಬ್ಬರಾಗಿದ್ದರು.

ಬ್ರಿಟಿಷರ ಕೈಮೇಲಾಗಿ ಐ.ಎನ್.ಎ.ಸೇನೆ ಶರಣಾಗತವಾದ ಮೇಲೆ ಸೆರೆಯಾಳುಗಳಾದ ಬಂಡಾಯಗಾರರನ್ನು ಬಂಧಿಸಿ ದೆಹಲಿ ಕೆಂಪುಕೋಟೆಯಲ್ಲಿ ದೇಶದ್ರೋಹದ ಆಪಾದನೆ ಹೊರೆಸಿ ವಿಚಾರಣೆ ನಡೆಸಿದಾಗ ರೆಡ್ಡಿಯವರೂ ಒಬ್ಬ ಅಪರಾಧಿಯಾಗಿದ್ದರು.

ನಂತರ ತನ್ನ ತವರೂರಿಗೆ ಮರಳಿ ಕರ್ನಾಟಕದಲ್ಲಿ ಸಮಾಜವಾದಿ ಪಕ್ಷ ಕಟ್ಟಿ,ಬೆಳೆಸಿ ,ಸಮಾಜಿಕ ನ್ಯಾಯಕ್ಕಾಗಿ ಹೋರಾಟ ನಡೆಸಿದರು. ಈ ಸಂದರ್ಭದಲ್ಲಿ ಕಾಗೋಡು ಚಳವಳಿಯಲ್ಲೂ ಸಕ್ರಿಯ ಪಾತ್ರವಾಗಿ ಚಳವಳಿಗೆ ಶಕ್ತಿನೀಡಿದವರಲ್ಲಿ ಇವರು ಒಬ್ಬರಾಗಿದ್ದಾರೆ.

## ಪತ್ರಕರ್ತ ಖಾದ್ರಿ ಶಾಮಣ್ಣ

ಪತ್ರಕರ್ತ ಖಾದ್ರಿ ಶಾಮಣ್ಣ ಸಮಾಜವಾದಿ ಸಿದ್ಧಾಂತಕ್ಕೆ ಮಾರುಹೋಗಿ ಸಮಾಜವಾದಿಯಾಗಿ ರೂಪುಗೊಂಡವರು. ಸಂಪ್ರದಾಯಸ್ಥ ಕುಟುಂಬದಿಂದ ಬಂದವರಾದರೂ ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಅವರ ತತ್ವ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡವರು. ೧೯೪೨ ರಲ್ಲಿ ಬ್ರಿಟಿಷರೇ ಭಾರತ ಬಿಟ್ಟು ತೊಲಗಿರಿ ಚಳವಳಿಯಲ್ಲಿ ಹೋರಾಟ ನಡೆಸಿ ಜೈಲು ವಾಸ ಅನುಭವಿಸಿದವರು.

ವಿದ್ಯಾರ್ಥಿಯಾಗಿದ್ದಾಗಲೇ ಚಳವಳಿ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದ ಖಾದ್ರಿಶಾಮಣ್ಣನವರು ವಿದ್ಯಾಭ್ಯಾಸ ಅರ್ಧಕ್ಕೆ ನಿಲ್ಲಿಸಿ ಸಾರ್ವಜನಿಕ ಬದುಕಿಗೆ ತನ್ನ ಬದುಕನ್ನು ತೆರೆದುಕೊಂಡರು. ಅಕ್ಷರವನ್ನೇ ಖಡ್ಗವಾಗಿ ಝಳಪಿಸಿದರು. ನಾಡಿನಾದ್ಯಂತ ಹರಿತವಾದ ಲೇಖನದಿಂದ ಚಳವಳಿ ಸ್ಫೂರ್ತಿಯ ಕೇಂದ್ರಬಿಂದುವಾಗಿದ್ದವರು. ಪ್ರಜಾವಾಣಿ ಪತ್ರಿಕೆ, ಕನ್ನಡ ಪ್ರಭ ಪತ್ರಿಕೆಗಳಲ್ಲಿ ಕೆಲಸ ನಿರ್ವಹಿಸಿದ್ದ ಇವರು ಸಮಾಜಿಕ ನ್ಯಾಯದ ಪರವಾಗಿ ತಮ್ಮ ಲೇಖನಿಯನ್ನು ಹಿಡಿದಿದ್ದವರು.

ರಾಷ್ಟ್ರನಾಯಕರಾದ ಡಾ.ಲೋಹಿಯಾ, ಜೆ.ಪಿ.ಯವರ ವಿಚಾರಧಾರೆಗಳಿಗೆ ಮನಸೂರೆಗೊಂಡು ಪ್ರಭಾವಿತರಾಗಿ ಸಮಾಜವಾದಿಯಾಗಿದ್ದ ಶಾಮಣ್ಣನವರು. ಕಟ್ಟುವೆವು ನಾವು ಎಂಬ ತಲೆ ಬರಹದ ಮೂಲಕ ಸಮಾಜವಾದಿ ಪಕ್ಷದ ಪ್ರಣಾಳಿಕೆಯನ್ನು ಸಿದ್ಧಪಡಿಸಿದ್ದು ಎಲ್ಲರನ್ನೂ ಆಕರ್ಷಿಸಿತ್ತು.

ಪತ್ರಕರ್ತ ಶಾಮಣ್ಣನವರ ಬರಹಗಳಲ್ಲಿ ಮೊನಚು, ಕೊಂಕು ನುಡಿಗಳ ಬರಹಗಳಿಂದ ನಾಡಿನಲ್ಲಿ ಖ್ಯಾತರಾಗಿದ್ದವರು.

ಕಾಗೋಡು ಚಳವಳಿಯಲ್ಲಿ ಇವರೂ ಸಕ್ರಿಯವಾಗಿ ಪಾಲ್ಗೊಂಡು ಕಾಗೋಡು ಚಳವಳಿಯ ಯಶಸ್ಸಿಗೆ ಕಾರಣಕರ್ತರಾಗಿದ್ದರು.

## ಮುಲ್ಕಾಗೋವಿಂದರೆಡ್ಡಿ

ಸಮಾಜವಾದಿ ಚಿಂತಕರಾದ ಇವರು ಚಿತ್ರದುರ್ಗ ಜಿಲ್ಲೆಯವರು. ಸಮಾಜವಾದವನ್ನೇ ತನ್ನ ಉಸಿರಾಗಿಸಿಕೊಂಡಿರುವ ಮುಲ್ಕಗೋವಿಂದರೆಡ್ಡಿಯವರು, ಕಾಗೋಡು ಚಳವಳಿಯಲ್ಲಿ ಸಮಾಜವಾದಿ ಪಕ್ಷದ ಕರೆಗೆ ಓಗೊಟ್ಟು ಸಕ್ರಿಯವಾಗಿ ಪಾಲ್ಗೊಂಡಿದ್ದವರು.

ಶ್ರೀಯುತರು ಒಂದು ಅವಧಿಗೆ ಶಾಸಕರಾಗಿ ಆಯ್ಕೆಗೊಂಡಿದ್ದರು.ಅಲ್ಲದೆ ರಾಜ್ಯಸಭೆಯ ಸದಸ್ಯರಾಗಿ ಆಯ್ಕೆಗೊಂಡಿದ್ದರು. ಇವರು ಉತ್ತಮ ಸಂಘಟನಾ ಚತುರರು, ಉತ್ತಮ ವಾಗ್ಮಿಯಾಗಿದ್ದರು.

ಸಮಾಜವಾದಿ ಪಕ್ಷ ರಾಜ್ಯದಲ್ಲಿ ಬೆಳೆಯಲು ಅತ್ಯಂತ ಸಹಕಾರ ನೀಡಿದವರಲ್ಲಿ ಇವರು ಒಬ್ಬರಾಗಿದ್ದರು. ಡಾ.ಲೋಹಿಯಾರವರೊಂದಿಗೆ ಮುಲ್ಕಗೋವಿಂದರೆಡ್ಡಿ ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಿ ಪೊಲೀಸರಿಂದ ಬಂಧಿತರಾಗಿದ್ದರು.

## ಕಾರ್ಮಿಕ ನಾಯಕ ಬಾ.ಸು.ಕೃಷ್ಣಮೂರ್ತಿ

ಕಾರ್ಮಿಕ ಮುಖಂಡ ಬಾ.ಸು.ಕೃಷ್ಣಮೂರ್ತಿಯವರು ಈ ನಾಡು ಕಂಡ ಉತ್ತಮ ಹೋರಾಟಗಾರರಲ್ಲಿ ಒಬ್ಬರಾಗಿದ್ದರು. ಕಾಗೋಡು ಸತ್ಯಾಗ್ರಹದಲ್ಲಿ ಭಾಗವಹಿಸಿ ರೈತರನ್ನು ಹುರಿದುಂಬಿಸಿ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಅನುವು ಮಾಡಿದ್ದರು.

ಇವರದು ಸಂಘಟನಾ.ಕೇಂದ್ರ ಬೆಂಗಳೂರು ಆಗಿತ್ತು. ಹೀಗಾಗಿ ಇಲ್ಲಿನ ಕಾರ್ಮಿಕರ ಹೋರಾಟಕ್ಕೆ ತೀವ್ರತೆಯನ್ನು ಒದಗಿಸಿದವರಲ್ಲಿ ಬಾ.ಸು.ಕೃಷ್ಣಮೂರ್ತಿಯವರ ಪಾತ್ರ ಹಿರಿದಾದುದಾಗಿದೆ. ವಿದ್ಯುತ್ ಕಾರ್ಖಾನೆ, ಹೆಚ್.ಎ.ಎಲ್. ನೌಕರರ ಸಂಘಟನೆ, ನಗರಸಭೆ ನೌಕರರ ಸಂಘಟನೆ ಮುಂತಾದ ಸಂಘಟನೆಯಲ್ಲಿ ತೊಡಗಿಕೊಂಡು ಕಾರ್ಮಿಕರ ಹಿತವನ್ನು ಕಾಪಾಡುವಲ್ಲಿ ಶ್ರಮಿಸಿದ್ದಾರೆ.

ಇದರೊಂದಿಗೆ ಕಿಡಿ ಎಂಬ ವಾರಪತ್ರಿಕೆಯನ್ನು ಆರಂಭಿಸಿ ಅದರ ಮೂಲಕ ನಾಡಿನ ಉತ್ತಮ ಬೆಳಕನ್ನು ಚೆಲ್ಲುವಲ್ಲಿ ಬರವಣಿಗೆಗಳು ಪ್ರಮುಖ ಪಾತ್ರವಹಿಸಿದ್ದವು.

# ಕಾಗೋಡು ಚಳವಳಿಗಳಲ್ಲಿ ಭಾಗವಹಿಸಿದ್ದ ಇನ್ನೂ ಅನೇಕ ನಾಯಕರುಗಳ ಹೆಸರಗಳನ್ನು ಇಲ್ಲಿ ದಾಖಲಿಸಲಾಗಿದೆ.

ಸವಾಜಿ ಮಾಸ್ತಮ್ಮನವರು, ರೈತರ ಸ್ವಾಭಿಮಾನದ ಕಿಡಿ ಕಣಸೆ ಜಟ್ಟಪ್ಪನವರು,ಯಲಗಳಲೆ ಹುಚ್ಚಪ್ಪನವರು, ಎಲೆಕನ್ನಪ್ಪನವರು, ಮರೇನ ಚೌಡಪ್ಪ ಕಣಸೆ, ಸಮಾಜವಾದಿ ನಾಯಕ ಎ.ಎಚ್.ಶಿವಾನಂದ ಸ್ವಾಮಿ, ಟಿ.ಎಸ್.ಗಂಡುಗಲಿ, ಬಸವಾನಿ ರಾಮಶರ್ಮರು,ಲೋಕಪಾಲ್,ನಾಭಿರಾಜಯ್ಯ, ಜಿ.ಆರ್.ಜಿ.ನಗರ, ಕೆ.ವೀರಭದ್ರಪ್ಪ ವಕೀಲರು, ಕಾರ್ಮಿಕ ಮುಖಂಡ ಹೆಚ್.ಪಾಟೀಲ್,ಸಮಾಜವಾದಿ ಬಿ.ಶ್ರೀಕಂಠಪ್ಪ, ಸಮಾಜವಾದಿ ಬಿ.ಎಸ್.ಗೋವಿಂದಪ್ಪ, ಮಿಂಚು ಪತ್ರಿಕೆಯ ಎ.ವಿ.ಶ್ರೀನಿವಾಸ್, ಹೆಚ್.ಎನ್.ಸೀತಾರಾಂ,ಶಾಂತಾಳರು,ಹಿರಿಯ ಸಮಾಜವಾದಿ ಕುಪ್ಪಗುಡ್ಡೆ ಕೆ.ಹೆಚ್.ಮರಿಯಪ್ಪನವರು, ಸಮಾಜವಾದಿ ಪಾಣಿ ಬಸವಣ್ಯಪ್ಪ ಹಿರೇಶಕುನಸ, ಸಮಾಜವಾದಿ ಹೋರಾಟಗಾರ ಮಂಚಿ ದ್ಯಾವಪ್ಪ ಹಿರೇಶಕುನ,ಸಮಾಜವಾದಿ ತವನಂದಿ ನಿಂಗಪ್ಪ,ಸಮಾಜವಾದಿ ಒಂಟಿಧ್ವನಿ ರಾಮಚಂದ್ರಪ್ಪ, ಚಿತ್ರಟ್ಟೆಹಳ್ಳಿ ಭೀಮಪ್ಪ,ಹೊಸೂರು ರಾಮನಾಯ್ಕರು, ಶ್ರೀ ಗುಬ್ಬಚ್ಚಿ ರಾನಾಯ್ಕರು, ಬಸವರೆಡ್ಡಿ , ಶ್ರೀ ಗೋಪಾಲಕೃಷ್ಣ ಉರಾಳ, ಶಿವಮೊಗ್ಗ ಪೊನ್ನಮ್ಮಾಳ್ ಸಮಾಜವಾದಿ ನಾಯಕಿ, ಕಮ್ಯುನಿಷ್ಟ್ ನಾಯಕ ವೆಂಕಟಗಿರಿಯಪ್ಪ, ಹೋರಾಟಗಾರ ನಾರಾಯಣರೆಡ್ಡಿ ಬಾಗೆಪಲ್ಲಿ, ಬಿ.ಎಸ್.ಚಂದ್ರಶೇಖರ್, ಎಸ್.ಎಸ್.ಕುಮಟಾ,ಅಮ್ಮೆಂಬಳ ಬಾಳಪ್ಪನವರು, ದತ್ತೋಬರಾವ್‌ಬಾಪಟ್,ಅದರಂತೆ ತಮ್ಮಣ್ಣೇಗೌಡರು, ವೆಂಕಟರಾವ್,ಪೇಪರ್‌ಬಾಬು ವೆಂಕಟರಾವ್, ಚಳುವಳಿಯ ಟಿನ್‌ಮೇಕರ್ ಹಮೀದ್ ಮತ್ತು ಪ್ಯಾರು,ಕೇಶವಅಯ್ಯಂಗಾರ್, ಎಸ್.ಪಿ.ರಾಮಚಂದ್ರ,ಕಾರ್ನಾಡ್‌ರಾಘವೇಂದ್ರ, ಹೆಚ್.ಕೃಷ್ಣರಾವ್, ಎ.ಪಿ.ಕಲ್ಲೂರ್, ಹೆಚ್.ಬಾಬು, ಡಿ.ಎಸ್.ಸುಬ್ರಾವ್, ಆರ್.ಎನ್.ಕೇಶವಮೂರ್ತಿ, ಬಿ.ಆರ್.ರಘುಪತಿ, ಸಮಾಜವಾದಿ ದಿ.ವಾಳದ ಹನುಮಂತಪ್ಪ, ಸಿ.ಬಿ.ಚಂದ್ರಶೇಖರ್, ಎಸ್.ರಾಮಯ್ಯ,ಕೆ.ಕೆಂಚಪ್ಪನವರು.

ದಿಗರಿ ನಾಗಪ್ಪ ಮೆಳವರಿಗೆ, ಹಸುವಂತೆ ದ್ಯಾವಪ್ಪ, ಗಾಡಿಗನ ಕನ್ನಪ್ಪ, ಎ.ಕೆ.ಸುಬ್ಬಪ್ಪ, ಕಳ್ಮಡಿ ಹುಚ್ಚನಾಯ್ಕರು,ಬಿಳಿಯನ ಸಾವಿತ್ರಮ್ಮ, ಸೈದೂರರ ಮನೆ ಕಾಳೇರ ಬಸಪ್ಪ, ಮೆಳವರಿಗೆ ಮೈಲಪ್ಪ, ಕೋಣೆ ಕನ್ನಮ್ಮ,ಅಳ್ಳೆಸಣ್ಣಪ್ಪ, ದೊಡ್ಡೇರಿ ಈರಪ್ಪ, ಕರ್ಕಿ ಮೈಲಪ್ಪ,ಹೊಸಕ್ಕು ಮೈಲಪ್ಪ, ದ್ಯಾವ ಗಿರಿಯ ಟಪಾಲು, ಹೊಸ್ಮನೆ ಕೆರಿಯಪ್ಪ, ಬಡಗಿ ತಳವಾರ ಕೆರಿಯಪ್ಪ,, ಯಲಕುಂದ್ಲಿ,ಮಡಿವಾಳ ಕನ್ನಮ್ಮ, ಮಂಡಗಳಲೆ ಹುಚ್ಚಪ್ಪ, ಬಳ್ಳಿನ ಚೌಡಮ್ಮ, ಜನ್ನೆಹಕ್ಲು ತಿಮ್ಮಪ್ಪ ಗೌತಮಪುರ,ಗಾಡಿನ ಭೈರನಾಯ್ಕರು, ಕೆಂಚನ ಬೀರಮ್ಮ ಮತ್ತು ಕೆಂಚಪ್ಪ,ವಡ್ನಾಲದ ಚೌಡಪ್ಪ, ಹಂಚಿನಮನೆ ದ್ಯಾವಪ್ಪ ಲಂಡಿಗೆರೆ, ಚಂದು ಹುಚ್ಚಪ್ಪ ,ಮುಡುಗೋಡು ಮಂಜಪ್ಪ, ಗಿರಿಯನ ಕಚೇಮನೆ ಕನ್ನಪ್ಪ, ಮುಟುಗುಪ್ಪೆ ಕೆರಿಯಪ್ಪ, ಎ.ಕೆ.ರಾಮಪ್ಪ, ಕೆ.ಎಲ್.ಚೌಡಪ್ಪ ನಾಡಕಲಸಿ,ನೆಲ್ಲೂರು ಸುಬ್ರಹ್ಮಣ್ಯ, ಮುತ್ತನ ಕನ್ನಪ್ಪ, ಹಸ್ವಂತೆ ರಾಮಪ್ಪ, ಈರಮಾರ್ಯ ಕತ್ತಿ,ಕುಂಬ್ರಿ ಕೆರೆಯಪ್ಪ , ಮುಡುಗೋಡು ಮಾರ್ಯಪ್ಪ, ಹೊಸ್ಮನೆ

ಕರಿಯಪ್ಪ ಬಿನ್‌ಕನ್ನಪ್ಪ, ದೊಡ್ಡೇರಿ ದ್ಯಾವನಾಯ್ಕರು, ಸೈದೂರು ಸಣ್ಣಪ್ಪ, ಈರ ಗೌರ್‍ಯ ಫಲಾಣಿ, ಮಡಿವಾಳ ಪುಟ್ಟಪ್ಪ, ಹುಲಗೋಡು ನಾರಾಯಣಪ್ಪ, ರೊಡ್ಡಿ ದೇವಮ್ಮ, ಹೊಳೇಕೇವಿ ಜಟ್ಟ್ಯಪ್ಪ, ಕಾಳಿರಾಚಪ್ಪ,, ಕುಂಪ್ರಿ ತಿಮ್ಮಪ್ಪ, ಜನ್ನೆಹಕ್ಲು ಕೆರಿಯಪ್ಪ, ಗಡ್ಡದ ದ್ಯಾವಪ್ಪ, ಕಲ್ಲಿಚೌಡನಾಯ್ಕರ ಖೈರ, ಕಾಡನ ಮಂಜಪ್ಪ, ಹೊಸೂರು ರಾಮನಾಯ್ಕರು, ಕೊಂಡಿಕಾರ್ ಕೆಂಚಪ್ಪ,ಬರಸಿನ ಪಕೀರಪ್ಪನ ದ್ಯಾವಪ್ಪ, ಸಮಾಜವಾದಿಗಳ ಅತಿಥಿಗೃಹ, ಶಿವಮೊಗ್ಗ ಮಾರುತಿ ಪ್ರಿಂಟಿಂಗ್‌ಪ್ರೆಸ್,ಸಾಗರದ ಸಮಾಜವಾದಿ ಬಸ್ ಏಜೆಂಟರುಗಳು ರಾಜರಾವ್ ಮತ್ತು ಎಂ.ವಿ.ಪ್ರಭು, ಕಮ್ಯುನಿಷ್ಟ್ ನಾಯಕ ವೆಂಕಟಗಿರಿಯಪ್ಪನವರು, ಹೋರಾಟಗಾರ ನಾರಾಯಣ ರೆಡ್ಡಿ,ಖ್ಯಾತ ರಂಗನಿರ್ದೇಶಕ ಎನ್‌ಆರ್.ಮಾಸೂರ, ರೈತರ ವಕೀಲ ಮೃತ್ಯುಂಜಯರಾವ್ ಬಾಪಟ, ಕಾಸಲೆ ಮುದ್ದಪ್ಪ, ಆನಂದಪುರಂನ ಗುಂಡಪ್ಪ, ಆವಿನಹಳ್ಳಿ ಶ್ರೀಮಂತಪ್ಪ, ಡ್ರೈವರ್‌ರಾಜು, ಬಾಲಕೃಷ್ಣ, ರೈತಮುಖಂಡ ಕೃಷ್ಣಗೋಪಾಲ, ಕೆಳದಿ ಬ್ರಹ್ಮಸೂರಪ್ಪ, ಮಾಸೂರಿನ ಪೂಜಾರಿ ವೀರಭದ್ರಪ್ಪ, ಹಂದಿಗೋಡು ವೆಂಕಟಗಿರಿಯಪ್ಪ, ಗುಂಡಯ್ಯನ ಸುಬ್ರಾವ್,ಹಿರೇನಲ್ಲೂರ್ ಚೆನ್ನಬಸಮ್ಮ, ಚಿಕ್ಕಮತ್ತೂರಿನ ಹುಚ್ಚನಾಯ್ಕರು, ಕತ್ತಿ ಕನ್ನಪ್ಪ ಸೂರನಗದ್ದೆ, ಸೂರಗುಪ್ಪೆಯ ಸತ್ಯಾಗ್ರಹಿಗಳು, ಬೆಳೆಯೂರು ಲಚ್ಚಪ್ಪ, ಚಿಕ್ಕನೆಲ್ಲೂರು ತಿಮ್ಮಪ್ಪ ಮತ್ತು ಇನ್ನಿತರ ಸತ್ಯಾಗ್ರಹಿಗಳು,ಬಿ.ಸಣ್ಣಚೌಡಪ್ಪ ಕುಗ್ವೆ, ಗಾಂಧಿವಾದಿ ಗುಡ್ಡೆಕೇರಿ ಎಂ.ಸಿ.ಚೌಡಪ್ಪನವರು, ಮನೆಘಟ್ಟದ ಬಡಿಯಪ್ಪನವರುಗಳು.

ಕಾಗೋಡು ಗ್ರಾಮದ 70ಮಂದಿ ಸತ್ಯಾಗ್ರಹಿಗಳು,ಯಲಕುಂದ್ಲಿ ಗ್ರಾಮದ ಏಳು ಮಂದಿ ಸತ್ಯಾಗ್ರಹಿಗಳು,ಹಿರೇನಲ್ಲೂರಿನಿಂದ ಹನ್ನೆರಡು ಮಂದಿ ಸತ್ಯಾಗ್ರಹಿಗಳು,ಮೆಳವರಿಗೆ ಯಿಂದ ಶ್ರೀ ರಾಮನಾಯ್ಕರು,ಸೂರಗುಪ್ಪೆಯಿಂದ ಕಾಸಿತಿಪ್ಪಣ್ಣನವರು, ತಡಗಳಲೆಯಿಂದ ಹದಿಮೂರು ಮಂದಿ,ಸುಳ್ಳೂರಿನಿಂದಹನ್ನೊಂದು ಮಂದಿ, ಮಂಡಗಳಲೆಯಿಂದ ನಾಲ್ಕುಮಂದಿ, ಮರತ್ತೂರಿನಿಂದ ಆರುಮಂದಿ,ಕೆಲುವೆಯಿಂದ ಇಬ್ಬರು,ಹಿಂಡ್ಲೆಕೊಪ್ಪದಿಂದ ಇಬ್ಬರು,ಗಡೇಮನೆಯಿಂದ ಇಬ್ಬರು, ಇತರೆಯವರು 35ಮಂದಿಗಳು.

ಸೊರಬತಾಲ್ಲೂಕಿನಿಂದ ಒಟ್ಟು 83ಮಂದಿ ಕಾಗೋಡು ಸತ್ಯಾಗ್ರಹವನ್ನು ಬೆಂಬಲಿಸಿದ ಇತರರು ಒಟ್ಟು 37ಮಂದಿಯಾಗಿದ್ದಾರೆ.



# ಕಾಂಗ್ರೆಸ್ ಪಕ್ಷದ ಧುರೀಣ ಹಾಗೂ ಭೂಮಾಲಿಕ ಕೆ.ಜಿ.ಒಡೆಯರ್ ಪತ್ರಿಕಾ ಹೇಳಿಕೆ ನೀಡಿದ್ದನ್ನು ಪ್ರಜಾವಾಣಿ ಪತ್ರಿಕೆಯಲ್ಲಿ ವರದಿಯಾಗಿದ್ದ ಭಾಗವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

**ದಿನಾಂಕ : 15.5.1951**

ಸಾಗರ ತಾಲ್ಲೂಕಿನ ಪ್ರಾಮುಖ್ಯವಾಗಿ ಕಾಗೋಡಿನ ಅಕ್ಕಪಕ್ಕದ ಕೆಲವು ಗ್ರಾಮಗಳಲ್ಲಿ , ಕಳೆದ ಸುಮಾರು ಎರಡು ವರ್ಷಗಳಿಂದ. ಕೆಲವು ಗೇಣಿದಾರರಿಂದ ಒಂದಲ್ಲ ಒಂದು ರೂಪದಲ್ಲಿ ಹಿಡುವಳಿದಾರರ ಮೇಲೆ ಗೇಣಿದಾರರಿಂದ ಚಳವಳಿ ನಡೆಯುತ್ತಿದೆಯಷ್ಟೇ. ಇದನ್ನು ಆಗಾಗ್ಗೆ ಸಾರ್ವಜನಿಕರ ಹಾಗೂ ಸರ್ಕಾರದವರ ಗಮನಕ್ಕೆ ತರಲಾಯಿತು. ಆದರೂ ಕ್ರಮವನ್ನೂ ತೆಗೆದುಕೊಳ್ಳದೆ ಇದ್ದುದರಿಂದ ಪರಿಸ್ಥಿತಿ ವಿಕೋಪಕ್ಕೆ ಬಂದಿದೆ.

ಮಲೆನಾಡಿನಲ್ಲಿ ಜಮೀನಿನ ವಿಸ್ತೀರ್ಣ ಅಗಾಧವಾಗಿದೆ. ಆದರೆ, ರೈತರ ಸಂಖ್ಯೆ ಕಮ್ಮಿ.ಹೀಗಾಗಿ ಅನೇಕ ಕಡೆಗಳಲ್ಲಿ ಜಮೀನು ಪಾಳು ಬಿದ್ದಿದೆ. ಈಗ ರೋಗ ರುಜಿನಗಳ ದಸೆಯಿಂದ ಹಳ್ಳಿಗಳು ಕ್ಷೀಣ ಹೊಂದಿ, ಫಲವತ್ತಾದ ಜಮೀನುಗಳು ಅನೇಕ ಎಕರೆ ವಿಸ್ತೀರ್ಣ ಕಾಡುಪ್ರದೇಶಗಳಾಗಿವೆ. ಇಂತಹ ಪರಿಸ್ಥಿತಿಯಲ್ಲಿ ಒಂದೇ ಶರೀರದಲ್ಲಿನ ಬೇರೆ ಬೇರೆ ಅವಯವಗಳಂತೆ ಹಿಡುವಳಿದಾರನೂ ರೈತನೂ ಪ್ರಕೃತಿಯ ನಾನಾ ರೂಪದ ಕ್ರೌರ್ಯಗಳನ್ನು ಎದುರಿಸಿ ಸೌಂದರ್ಯ ಸೌಭಾಗ್ಯಗಳನ್ನು ಅನುಭವಿಸಿಕೊಂಡು ಅಣ್ಣತಮ್ಮಂದಿರಂತೆ, ಸಂಸಾರಿಕರಂತೆ ನಡೆದುಕೊಂಡು ಬಂದು ತಮ್ಮ ಜೀವನ ಯಾತ್ರೆಯನ್ನು ಸಾಧಿಸಿಕೊಂಡು ಸುಖಸಂತೋಷಗಳಿಂದ ಜೀವಿಸುತ್ತಿದ್ದರು.

ಇಬ್ಬರೂ ಹೊಂದಿಕೊಳ್ಳದೆ ಗತ್ಯಂತರವಿಲ್ಲ. ಹಿಡುವಳಿದಾರನಿಗೆ ಜಮೀನಿನಲ್ಲಿ ಬೆಲೆಯಿಲ್ಲ. ರೈತನಲ್ಲಿ ಬೆಲೆಯಿದೆ. ಅಂದಾಗ ಒಕ್ಕಲು ಒಡೆತನ ಮಧುರವಾಗಿರಲೇಬೇಕು.ಹಿಡುವಳಿದಾರನು ರೈತನಿಗೆ ಸಕಲ ಕಾಲದಲ್ಲೂ ನೆರವು ನೀಡುತ್ತಾ ಬಂದಿದ್ದಾನೆ. ಕಂದಾಯ ಕಾಣಿಕೆ ಸಕಾಲಕ್ಕೆ ಕಟ್ಟುತ್ತಾ ಬಂದಿದ್ದಾನೆ. ಅನೇಕ ಸಾರಿ ಸಾಲಸೋಲಗಳಿಗೆ ತುತ್ತಾಗಿ ಮನೆ ಮಠ ಕೂಡ ಮಾರಿಕೊಂಡಿದ್ದಾನೆ. ಒಂದು ರೀತಿ ದಯಾಮಯ ಯಜಮಾನತನವಿತ್ತು. ಇಂದು ಇಂತಹ ಪರಿಸ್ಥಿತಿ ಬಿಗಡಾಯಿಸಿದೆ. ಇದರಿಂದ ಉಭಯತಾದಿ ಅನುಕೂಲವಿಲ್ಲ. ಆದರೆ ರೈತರಲ್ಲೇ ಕೆಲವರು ಏನೂ ತಿಳಿಯದ, ಹಿಂದುಳಿದ ಮತದ ಕಟ್ಟುನಿಟ್ಟುಗಳಿಗೆ ತಲೆಬಾಗುವ ವಿವೇಚನಾ ಶಕ್ತಿ ಇಲ್ಲದ, ಸತ್‌ಸಂಪ್ರದಾಯ ಅರಿಯದ ಈ ರೈತರಿಗೆ ಇಲ್ಲಸಲ್ಲದ ಭರವಸೆಗಳನ್ನು ಆಸೆಗಳನ್ನೂ ತೋರಿಸಿ ತಮ್ಮ ನಾಯಕತ್ವದಲ್ಲಿ ಇಂದ್ರಲೋಕವನ್ನು ಭೂಲೋಕಕ್ಕೆ ಇಳಿಸುವಂತಹ ನಂಬಿಕೆಗಳನ್ನು ಬೋಧಿಸಿ, ಇವರಲ್ಲಿ ಜನ್ಮಜಾತ ಇದ್ದಂತಹ ನಂಬಿಕೆಯನ್ನು ಕಲಕಿ, ಅವರನ್ನು ತಪ್ಪುದಾರಿಗೆ ಎಳೆದಿದ್ದಾರೆ.

ತಪ್ಪು ಯಾರದ್ದು?, ಇದನ್ನು ಹೇಗೆ ನಿವಾರಿಸಬೇಕು?, ಎಲ್ಲಿ ನಿವಾರಿಸಬೇಕು?ಎಂಬ ಪ್ರಶ್ನೆ ಉದ್ಭವಿಸುತ್ತದೆ. ಹಾಗೇ ರೈತರನ್ನು ಜಮೀನಿನಿಂದ ಓಡಿಸುವ ಪ್ರಶ್ನೆಯೇ ಇಲ್ಲ. ರೈತನನ್ನು ಬಿಡಿಸುವ ಗೋಜಿಗೆ ಹೋಗುವ ಪ್ರಯತ್ನ ನೂರಾರು ವರ್ಷಗಳಿಂದ ಯಾರೂ ಹೇಳಿಲ್ಲ. ರೈತರ ಅಬಾದು ಮಲೆನಾಡಿನಲ್ಲಿ ಕಡಿಮೆಯಾದಾಗ ಬಿಡಿಸುವ ಪ್ರಶ್ನೆಯೇ ಏಳುವುದಿಲ್ಲ.

"ನಾನು ಕೊಟ್ಟಷ್ಟು ತೆಗೆದುಕೊಳ್ಳಬೇಕು, ಕೊಡುವ ಪ್ರಮಾಣದಲ್ಲಿ ತೆಗೆದುಕೊಳ್ಳಬೇಕು. ನಾವು ಕೊಡುವುದು ಧರ್ಮದಹಾಗೆ, ಸಾಗುವಳಿದಾರನು ಜಮೀನಿನ ಯಜಮಾನ, ನಾವು ಜಮೀನು ಬಿಡುವುದಿಲ್ಲ. ಸತ್ಯಾಗ್ರಹ ಮಾಡುತ್ತೇವೆ!ಸಾಮೂಹಿಕ ಸತ್ಯಾಗ್ರಹ ಮಾಡವೆವು"ಎಂದು ಮುಂತಾಗಿ ಕಾನೂನಿಗೆ ವಿರೋಧವಾಗಿ ಚಳವಳಿ ಹೂಡಿ ಉದ್ರೇಕಪೂರಿತವಾದ ಭಾಷಣಗಳನ್ನು ಮಾಡಿ ಭಯೋತ್ಪಾದನೆ ಉಂಟು ಮಾಡುತ್ತಾ, ಈ ಎರಡು ವರ್ಷದ ಗೇಣಿಯನ್ನೂ, ಸಾಲವನ್ನೂ ಕೊಡದೆ ಮನಸ್ವಿಯಾಗಿ ನಡೆಯುತ್ತಿದ್ದಾರೆ. ಸರ್ಕಾರದ ಡಿಪೋವಿಗೂ ಅಲ್ಪಸ್ವಲ್ಪ ಕೊಡುತ್ತಾ ಜಮೀನನ್ನೂ ಆರೋಪಸ್ಥಿತಿಗೆ ತರುತ್ತಾ ಹಿಡುವಳಿದಾರರ ಮೇಲೆ ಬಲಪ್ರಯೋಗ ಮಾಡುತ್ತಿರುವುದು ಧರ್ಮವೇ? ಯಾವೊಂದು ವರ್ಗವನ್ನು ಬಡಿಯುವುದರಿಂದ ಮತ್ತೊಂದು ವರ್ಗದ ಹಿತವಾಗದು. ಉಭಯತ್ರ ಹಿತ ಒಮ್ಮತ ಸಮ್ಮತದಲ್ಲಿದೆ.



# ರೈತ ಸಂಘದ ಅಧ್ಯಕ್ಷ ಡಿ.ಮೂಕಪ್ಪನವರು ಮಾಡಿದ ಬಾಷಣವನ್ನು ಪ್ರಜಾವಾಣಿ ಪತ್ರಿಕೆ ಯಲ್ಲಿ ವರದಿ ಮಾಡಿದ ಭಾಗವನ್ನು ಇಲ್ಲಿ ನೀಡಲಾಗಿದೆ.

**ದಿನಾಂಕ:15.ಮೇ .1951**

ರೈತರಿಗೂ ಜಮೀನುದಾರರಿಗೂ ಮಧುರಬಾಂಧವ್ಯ ಇದೆಯೆಂದೂ, ಪರಿಸ್ಥಿತಿ ಕೆಟ್ಟಿಲ್ಲವೆಂದೂ ಹೇಳುತ್ತಾ, ಶ್ರೀ ಒಡೆಯರ್‌ರವರು ಅನೇಕ ವರ್ಷಗಳಿಂದ ನಡೆಯಿಸಿಕೊಂಡು ಬಂದ ರೈತರನ್ನು ಈಗ ಹೋಗಿ ಎಂದರೆ, ಎಲ್ಲಿಗೆ ಹೋಗಬೇಕು?ಎಂಬುದಾಗಿ ಪ್ರಶ್ನಿಸಿದ್ದಾರೆ. ಅಕ್ರಮವಾಗಿ ಕಾನೂನಿಗೆ ವಿರುದ್ಧವಾಗಿ ಬಲತ್ಕಾರದಿಂದ ಈಗ ರೈತರನ್ನು ಬಿಡಿಸುತ್ತಿರುವವರೇ ಈ ಪ್ರಶ್ನೆಗೆ ಉತ್ತರ ಹೇಳಬೇಕು. ಎಲ್ಲಿ ಹೋಗಬೇಕು?ಈಗ ಏಕೆ ರೈತರನ್ನು ಬಿಡಿಸಬೇಕು?ಎಂಬ ಪ್ರಶ್ನೆಯನ್ನೇ ರೈತರು ಕೇಳುತ್ತಿದ್ದಾರೆ. ಈವರೆಗೆ ಈ ಪ್ರಶ್ನೆಗೆ ಯಾರೂ ಉತ್ತರ ಕೊಟ್ಟಿಲ್ಲಾ. ಇದು ತುಂಬಾ ವಿಸ್ಮಯಕರವಾಗಿದೆ.

ದೊಡ್ಡ ತತ್ವಗಳನ್ನು ಇತರರಿಗೆ ಧಾರಾಳವಾಗಿ ಉಪದೇಶ ಮಾಡಬಹುದು. ತಾವು ಆಚರಿಸುವುದು ಮಾತ್ರ ಕಷ್ಟ. ಕೊಟ್ಟಿದ್ದು ತೆಗೆದುಕೊಳ್ಳಿ ಎಂದು ಗೇಣಿದಾರರು ಹೇಳಿದರೆ ತಪ್ಪು. ಆದರೆ ಕೇಳಿದಷ್ಟು ಕೊಡಬೇಕೆಂದು ಹಿಡುವಳಿದಾರರು ಬಲಾತ್ಕರಿಸಿದರೆ ತಪ್ಪಲ್ಲ!

ಕೆಲವ ಕಡೆ ಜಮೀನುದಾರರು ಕಡ್ಡಾಯವಾಗಿ ಮಾಡಿಸುತ್ತಿದ್ದ, ಮನುಷ್ಯತ್ವಕ್ಕೆ ಹೀನವಾದ ಬಿಟ್ಟಿ ಕೆಲಸದ ಪದ್ಧತಿಯನ್ನೂ, ಜೀತದ ಪದ್ಧತಿಯನ್ನೂ ಅನೇಕ ಮಾಮೂಲುಗಳ ಹೆಸರಿನ ಸುಲಿಗೆಯನ್ನು ಅಕ್ರಮವಾದ ಅಳತೆ ತೂಕದ ಬಹಿರಂಗ ಮೋಸದ ಪದ್ಧತಿಯನ್ನೂ, ರೈತರು ಸಂಘಟಿತರಾಗಿ ಇನ್ನು ಸಹಿಸಬಾರದೆಂದು ನಿರ್ಧರಿಸಿರುವುದರಿಂದ, ಕೆಲವು ಜಮೀನುದಾರರು ರೈತರ ಮೇಲೆ ಅಪಪ್ರಚಾರಕ್ಕೆ ತೊಡಗಿರುವುದು ತೀರಾ ಖಂಡನೀಯ.

ರೈತ ಸಂಘ ಸ್ಥಾಪಿಸಿದರೂ ಕಾಂಗ್ರೆಸ್ಸಿಗರೇ ಗೇಣಿ ವಿಚಾರದಲ್ಲಿ ನ್ಯಾಯವಾದ ಬೇಡಿಕೆಗಳಿಗೆ ಸಮ್ಮತಿಸಿ ಎಷ್ಟೋ ಮಂದಿ ಜಮೀನ್ದಾರರು ಅದರಂತೆ ನಡೆದುಕೊಂಡಿದ್ದಾರೆ. ಕಾಗೋಡಿನ ಸುತ್ತಮುತ್ತಲ ಕೆಲ ಗ್ರಾಮಗಳಲ್ಲಿ ಮಾತ್ರ ಈಗೊಂದಲವಾಗಿದೆ.

ಅನೇಕ ವರ್ಷಗಳಿಂದ ಕೆಲವು ಜಮೀನುದಾರರ ಶೋಷಣೆಗೆ ಒಳಗಾಗಿದ್ದ ರೈತರು, ತಮಗೆ ನ್ಯಾಯ ದೊರಬೇಕೆಂದೂ, ಕಾನೂನಿನ ರಕ್ಷಣೆ ಬೇಕೆಂದೂ, ಕೇಳುತ್ತಿರುವುದನ್ನು `ಚಳವಳಿ'ಎಂದು ಹೇಳಿ ಉತ್ಪ್ರೇಕ್ಷೆ ಮಾಡುವುದು. ಮಾನ್ಯ ಮಿತ್ರರೂ, ಹಿರಿಯರೂ ಮೇಲಾಗಿ ಮುಖಂಡರೂ ಆದ ಶ್ರೀ ಒಡೆಯರಂತಹವರಿಗೆ ಭೂಷಣವಲ್ಲ. ನ್ಯಾಯಬದ್ಧವಲ್ಲ.

ನ್ಯಾಯವಾಗಿ, ಧರ್ಮಕ್ಕೆ ಅನುಸಾರವಾಗಿ ಹಾಗೂ ಕಾನೂನಿಗೆ ಅನುಗುಣವಾಗಿ ಬೇಸಾಯ ಮಾಡುವ ರೈತರನ್ನು ಈಬಿತ್ತನೆ ಕಾಲದಲ್ಲಿ ಬೇಸಾಯ ಮಾಡದಂತೆ ಜಮೀನುದಾರರುಗಳು ಅನ್ಯಥಾ ತೊಂದರೆಗೊಳಪಡಿಸಿ ತಡೆಯುತ್ತಿದ್ದಾರೆಯೇ ವಿನಃ ರೈತರ ಗೊಂದಲವೇನೂ ಇಲ್ಲಾ. ಜಮೀನುದಾರರುಗಳು ತಡೆಯುತ್ತಿರುವುದು ಮಾತ್ರ ಭಯಂಕರ ಅನ್ಯಾಯವಾಗಿದೆ.

ಇದು ಕೇವಲ ತಾಲ್ಲೂಕಿನ ಪರಿಸ್ಥಿತಿಯಲ್ಲ. ಶ್ರೀ ಒಡೆಯರ ಊರಾದ ಕಾಗೋಡು ಗ್ರಾಮವಾದ ಒಂದು ಊರಿನ ಒಬ್ಬ ಜಮೀನುದಾರರಿಗೂ ನೂರಾರು ಬಡ ಮತ್ತು ಕಷ್ಟಸಹಿಷ್ಣುಗಳಾದ ರೈತರಿಗೂ ಸಂಬಂಧಪಟ್ಟ ಏಕಮಾತ್ರ ವಿಚಾರ ಅಷ್ಟೇ! ರೈತರು ಇಂದಿನವರೆಗಿನ ಗೇಣಿಯನ್ನು ಪೂರ್ತಿ ಪಾವತಿ ಮಾಡಿರುತ್ತಾರೆ. ರೈತರು ಎಂದೂ ಸಾಗುವಳಿ ಮಾಡುವವರು. ಭೂಮಿಯ ಒಡೆಯರೆಂದು ಹೇಳಿಲ್ಲ. ರೈತರು ಕೊಟ್ಟಷ್ಟನ್ನು ಕೊಟ್ಟ ಪ್ರಮಾಣದಲ್ಲಿ ತೆಗೆದುಕೊಳ್ಳಬೇಕೆಂದು ಕೇಳಿದ್ದಾರೆ. ತಮ್ಮ ಸಾಗುವಳಿ ಹಕ್ಕಿಗೆ ರಕ್ಷಣೆ ಕೊಡಬೇಕೆಂದೂ ನ್ಯಾಯವಾಗಿ ಹಾಗೆ ಗೇಣಿ ಸಂದ ರಶೀತಿ ವಗೈರೆ ದಾಖಲಾತಿಗಳನ್ನು ಕೊಡಬೇಕೆಂದೂ ಕೇಳಿದ್ದಾರೆ.

ತಮ್ಮ ಸಾಗುವಳಿ ಹಕ್ಕಿಗೆ ರಕ್ಷಣೆಕೊಡಬೇಕೆಂದೂ ಪ್ರಾರ್ಥಿಸಿದ್ದಾರೆ. ಸತ್ಯಾಂಶ ಹೀಗಿದ್ದರೂ ಕೆಲವರು ಜಮೀನುದಾರರು, ರೈತರು ಎಂದೂ ಎಷ್ಟು ಮಾತ್ರಕ್ಕೂ ಹೇಳದ, ಮನಸ್ಸಿನಲ್ಲಿಯೂ ಸಹ ಯೋಚಿಸದ ಮಾತನ್ನು ರೈತರುಗಳ ಅಭಿಪ್ರಾಯವೆಂದು ಹೇಳಿ ಅಪಪ್ರಚಾರ ಮಾಡುತ್ತಿರುವುದು ಜನರಿಗೂ , ಸರ್ಕಾರಕ್ಕೂ ಮಂಕುಬೂದಿ ಎರಚಲು ಯತ್ನಿಸುತ್ತಿರುವುದು ತೀರ ಖಂಡನೀಯವಾಗಿದೆ. ಕಾಗೋಡು ಗ್ರಾಮದ ಜಮೀನುದಾರರು ತಮಗೆ ಸರ್ಕಾರದ ಬೆಂಬಲವಿರುವುದರಿಂದಲೂ, ತಾವು ಪ್ರಭಾವಶಾಲಿಯಾದ ಕಾಂಗ್ರೆಸ್ ಮುಖಂಡರೆನಿಸಿಕೊಂಡಿರುವುದರಿಂದಲೂ, ಸರ್ಕಾರಕ್ಕೆ ಉತ್ಪ್ರೇಕ್ಷೆಯಿಂದ ಕೂಡಿದ ಸತ್ಯದೂರವಾದ ಸಂಗತಿಗಳನ್ನು ವರದಿ ಮಾಡಿ, ಅಕ್ರಮವಾಗಿ ಬಡ ಬೋರೇಗೌಡನ ಹಣದಿಂದ ತಮ್ಮ ಮನೆಗೆ ಸುಮಾರು ಮೂರು ತಿಂಗಳಿನಿಂದ, ಹದಿನೈದು ಇಪ್ಪತ್ತು ಜನ ಪೊಲೀಸಿನವರನ್ನೂ, ರಿಸರ್ವ್ ವಗೈರೆ ಚಾಲಕರನ್ನೂ ಸರ್ಕಾರದ ವೆಚ್ಚದಲ್ಲಿ ಪಡೆದುಕೊಂಡು ತಾವುಬಡ ರೈತರ ಬೂಟ್ಸ್‌ಮತ್ತು ಪಾದರಕ್ಷೆ ಪ್ರಯೋಗಗಳನ್ನು ಕೊಟ್ಟು, ಆರುಚಿಗಳನು ರೈತ ವರ್ಗವಾದ ಸ್ತ್ರೀ ಪುರುಷ, ಅಬಾಲವೃದ್ಧರಾದ ರೈತಬಾಂಧವರು ಎಂದೆಂದಿಗೂ ಮರೆಯದ ಮಾತಾಗಿ ಉಳಿದಿರುವುದು ಸ್ಪಷ್ಟವಾದ ಸಂಗತಿಯಾಗಿದೆ.

ಅಕ್ರಮವಾಗಿ ಸುಮಾರು ಇನ್ನೂರು ಜನ ಬಡರೈತರನ್ನು ಹಿಂಸಿಸಿ ದಸ್ತಗಿರಿ ವಗೈರೆ ಅಕ್ರಮ ಕಾನೂನು ಜಾರಿ ಮಾಡಿಸಿರುತ್ತಾರೆ. ಹಾಗೂ ಇದಕ್ಕೆಲ್ಲ ಮೂಲಕಾರಣರೂ, ಜಮೀನುದಾರರೂ ಆದ ನಿಮ್ಮಿಂದ ಮಾತ್ರವೇ ಹಲವು ಸುಳ್ಳು ಕೇಸುಗಳನ್ನೂ, ನೂರಾರು ಜನ ರೈತರ ಮೇಲೆಸಾಗರ ಸನ್ನಿಧಿ ಕೋರ್ಟ್ ಕಛೇರಿಗಳಲ್ಲಿ ದಾಖಲಾಗಿರುತ್ತದೆ. ಇಷ್ಟೇ ಸಾಲದೆಂದು ಮಹಿಳೆಯರನ್ನು ದಸ್ತಗಿರಿ ಮಾಡಿಸಿದ್ದಾರೆ.

ಎಲ್ಲಕ್ಕಿಂತ ಹೆಚ್ಚಾಗಿ ನೂರಾರು ಬಡಕುಟುಂಬಗಳನ್ನು ಮಳೆಗಾಲ ಪ್ರಾರಂಭವಾಗಿರುವ ಈ ಬಿತ್ತನೆ ಕಾಲದಲ್ಲಿ, ನಿರಾಶ್ರಿತರನ್ನಾಗಿಯೂ, ನಿರ್ಗತಿಕರನ್ನಾಗಿಯೂ ಮಾಡಿ, ದೇಶಾಂತರ ಓಡಿಸಲು ಯತ್ನಿಸುತ್ತಿದ್ದಾರೆ. ರೈತರ ಮೇಲೆ ಇಷ್ಟೆಲ್ಲಾ ಅತ್ಯಾಚಾರಗಳನ್ನು ನಡೆಸುತ್ತಲೇ ರೈತರಿಗೆ ವಿವೇಕ ಹೇಳಲು ಹೊರಟಿರುವುದು ಎಲ್ಲರಿಗೂ ತಿಳಿದಿದೆ. ಈ ಕಾಲದಲ್ಲಿ ಯಾರು ಯಾರನ್ನು ವಂಚಿಸಲು ಸಾಧ್ಯವಿಲ್ಲ.

ಕಾಂಗ್ರೆಸ್ಸಿನ ಮುಖಂಡರೆನಿಸಿಕೊಂಡು, ರೈತರ ಮೇಲೆ ನಿಷ್ಕರಣೆಯಿಂದ ಲಾಠಿ ಪ್ರಹಾರ ಮಾಡಿಸುವುದಕ್ಕಿಂತ, ನೀವು ಗೌರವದಿಂದ ಕಾಂಗ್ರೆಸ್ಸಿಗೆ ರಾಜೀನಾಮೆಯಿತ್ತು ನಿಜವಾದ ಜಮೀನುದಾರರಾಗಿಯೇ, ನಿಜವೇಷದಿಂದಲೇ ಹೊರಬಂದರೆ ರೈತರಿಗೂ ದೇಶಕ್ಕೂ ತುಂಬಾ ಉಪಕಾರರಾದೀತು ಇಷ್ಟೆ, ನನ್ನ ಸವಿನಯ ಪ್ರಾರ್ಥನೆ.



# ಸಿಡಿದೀತು

## 16.ಮೇ.1951ರಂದು ಪ್ರಜಾವಾಣಿ ಪತ್ರಿಕೆಯ ಸಂಪಾದಕೀಯ

ರೈತ ನೇಗಿಲಯೋಗಿ , ತಾಳ್ಮೆಯ ಪ್ರತಿಮೂರ್ತಿ;ದಣಿ ಹೊರಿಸುವ ಶ್ರಮದ ನೊಗವನ್ನು ತನ್ನ ಎತ್ತುಗಳು ಹೊರುವಂತೆ ಹೊತ್ತು. ಆತ ಬಾರಿಸುವ ಕಿರುಕುಳದ ಚಾಟಿ ಏಟುಗಳನ್ನು ಸಹಿಸಿ ದುಡಿದು ದಣಿದ ಜೀತಗಾರ. ಆತನಿಗೆ ಸಾಮಾನ್ಯಕ್ಕೆ ಕೋಪಬಾರದು. ಹೊರಗಿನ ಪ್ರಪಂಚದಲ್ಲಿ ಎಷ್ಟೇ ಕಲ್ಲೋಲವಾಗಿದ್ದರೂ, ಇನ್ನೂ "ಮಾಲೀಕ ಹೆಚ್ಚು ಪುಣ್ಯ ಮಾಡಿದವನು ಅದಕ್ಕೆ ಆತನಿಗೆ ಶ್ರೀ ಒಲಿದಿದ್ದಾಳೆ, ಗುಲಾಮನಂತೆ ದುಡಿದು ತೀರಿಸಬೇಕಾದ ಋಣದ ಭಾರ ತನ್ನ ಮೇಲೆ ಬೇಕಾದಷ್ಟಿದೆ"ಎಂದು ನಂಬುವ ಸ್ಥಿತಿಯಲ್ಲೇ ಇದ್ದಾನೆ.

ಆಧುನಿಕ ಬಾಳ್ವೆಯ ಕೇಂದ್ರಗಳಾದ ನಗರಗಳಲ್ಲಿ ವಾಸಿಸುವ ಕಾರ್ಖಾನೆಗಳ ಕಾರ್ಮಿಕನಿಗೆ ಬೀಳುವ ಹೊಸ ತತ್ವಗಳ ಚುರುಕು ರೈತನ ಮೇಲೆ ಏನೂ ಪರಿಣಾಮವನ್ನು ಉಂಟುಮಾಡದು. ಅಕ್ಷರ ಜ್ಞಾನ, ಪತ್ರಿಕಾ ಪ್ರಚಾರ ವಿಶ್ವಾನುಭವ ಆತನಿಗಂತೂ ದೂರ. ಆದರೆ ಈ ಜಡಭರತನಂತಹ ರೈತ ವಿಶ್ವಾಮಿತ್ರ ಕೋಪ ತಾಳಿದನಾದರೆ, ಅದರಿಂದ ಕ್ರಾಂತಿಯ ಸಿಡಿಮದ್ದುಗಳು ಹಾರುವವು ಎಂಬುದರಲ್ಲಿ ಸಂಶಯವೇನು?

ಸಾಗರದ ಕಾಗೋಡಿನ ಸುತ್ತುಮುತ್ತಲ ಗ್ರಾಮಗಳಿಂದ ಕಳೆದ ಎರಡು ತಿಂಗಳಿಂದ ಬರುತ್ತಿರುವ ರೈತರ ಸತ್ಯಾಗ್ರಹ, ಬಂಧನಗಳ ಸುದ್ದಿ ಪರಂಪರೆಗಳನ್ನು ಈ ದೃಷ್ಟಿಯಿಂದ ವಿಶ್ಲೇಷಿಸಿದರೆ, ಮೇಲೆ ಕಾಣುವಷ್ಟು ಸಾಮಾನ್ಯದ ಪ್ರಕರಣವೆಂದು ಉಪೇಕ್ಷಿಸುವ ಸಂಗತಿಯದಲ್ಲವೆಂದು ಅರ್ಥವಾದೀತು. ಈ ಗ್ರಾಮಾಂತರಗಳ ರೈತರು ಕೇವಲ ರೈತರಲ್ಲ;ಮಲೆನಾಡ ರೈತರು!ಹಬ್ಬಿದ ಮಲೆಗಳ ದಟ್ಟವಾದಕಾಡುಗಳ ಮಧ್ಯೆ, ಬಾಹ್ಯ ಜಗತ್ತಿಗೆ ದೂರವಾಗಿಯೋ ಎಂಬಂತೆ ಪ್ರತ್ಯೇಕವಾಗಿ ಬಾಳುತ್ತಿರುವವರು.

ಈ ಜನ ಪೊಲೀಸರ ಲಾಠೀ ಚಾರ್ಜುಗಳನ್ನೂ, ಬಂಧನಗಳನ್ನೂ ಸಹಿಸಿಕೊಂಡು ಸತ್ಯಾಗ್ರಹ ನಡೆಸುತ್ತಿರಬೇಕಾದರೆ ಬಹಳ ಬಲವತ್ತರವಾದ ಕಾರಣಗಳಿರಬೇಕೆಂಬುದರಲ್ಲಿ ಸಂಶಯವಿಲ್ಲ. ಈ ಸಂಬಂಧವಾಗಿ ನೆನ್ನೆಯ ಪತ್ರಿಕೆಯಲ್ಲಿ ಜಮೀನ್ದಾರರ ಪರವಾದ ಶ್ರೀ ಕೆ.ಜಿ.ಒಡೆಯರ ಮತ್ತು ರೈತರ ಪರವಾದ ಶ್ರೀ ಮೂಕಪ್ಪನವರ ಹೇಳಿಕೆಗಳನ್ನು ಪ್ರಕಟಿಸಿದ್ದೇವೆ. ಕೃಷಿ ಕಲಹದ ಮೂಲ ಬೆಳವಣಿಗೆ ಮತ್ತು ಪ್ರಕೃತಿ ಪರಿಸ್ಥಿತಿಯನ್ನು ಉಭಯರೂ ತಮ್ಮ ತಮ್ಮ ದೃಷ್ಟಿಕೋನಗಳಿಂದ ವಿವರಿಸಿದ್ದಾರೆ. ಬಹುಮಟ್ಟಿಗೆ ಇಬ್ಬರ ವಾದಗಳೂ ಭಿನ್ನವಾಗಿದ್ದರೂ ಒಂದು ವಿಷಯ ಮಾತ್ರ ಎರಡರಲ್ಲೂ ಎದ್ದು ಕಾಣುತ್ತಿದೆ.

ತಲೆತಲಾಂತರಗಳಿಂದ ರೂಢಿಸಿಕೊಂಡು ಬಂದಿದ್ದ ರೈತರನ್ನು ತಮ್ಮ ಜಮೀನುಗಳಿಂದ ಉಚ್ಚಾಟನೆ ಮಾಡಲು ಹಿಡುವಳಿದಾರರು ಹೂಡಿರುವ ಸಂಚೇ ಇಂದಿನ ಪ್ರಕ್ಷುಬ್ಧ ವಾತಾವರಣಕ್ಕೆ ಕಾರಣವೆಂಬುದು

ನಿಸ್ಸಂಶಯ. ಕಾರಣವೇನೇ ಇರಲಿ ಈ ಕ್ರಮ ತೀವ್ರ ಖಂಡನೀಯ . ಅದರಲ್ಲೂ ವಿರಾಮಜೀವಿ ಜಮೀನುದಾರರನ್ನು ಪೋಷಣೆ ಮಾಡಿಕೊಂಡು ಬಂದ ಹಸು ಮಕ್ಕಳಂತಹ ರೈತರನ್ನು ಪೊಲೀಸರು ಲಾಟಿ ಬಂಧನ ಹಿಂಸೆಗಳಿಗೆ ಗುರಿಮಾಡಿರುವುದನ್ನಂತೂ ಕ್ರೌರ್ಯ ಎಂದೇ ಕರೆಯಲಾಗಿದೆ.

ಉಳುಮೆಗಾರ ಭೂಮಿಯೊಡೆಯನೋ ಅಲ್ಲವೋ ಎಂಬ ತತ್ವಗಳ ಚರ್ಚೆ ಅತ್ತ ಇರಲಿ. ಆದರೆ ಹಿಡುವಳಿದಾರರ ಗುಲಾಮನಾಗಿ , ಜೀತದ ಆಳಾಗಿ, ನೇಗಿಲ ಎತ್ತಾಗಿ ದುಡಿದ ರೈತನಿಗೆ ಉಚ್ಚಾಟನೆಯ ಕೊಡುಗೆ ದ್ರೋಹವಲ್ಲವೇ?ಇಲ್ಲಿ ಮತ್ತೂ ಒಂದು ಮಾತಿದೆ. ಸಣ್ಣ ಹಿಡುವಳಿದಾರನ ಪ್ರಶ್ನೆ ಇಂದಿನ ಸಂದರ್ಭದಲ್ಲಿ ಏಳದು. ಆತ ಕೂಡ ರೈತನೆಂದೇ ಹೇಳಬೇಕು. ರೈತನಿಗೆ ಕಷ್ಟ ಕೊಡುವಷ್ಟು ಚೈತನ್ಯ ಆತನಲ್ಲಿಲ್ಲ. ಇಂದಿನಂತಹ ಪ್ರಕ್ಷುಬ್ದ ವಾತಾವರಣದಲ್ಲಿ ಆತನಿಗೆ ರೈತನಿಗೆ ದೊರಕುವುದು ಕಷ್ಟವೇ. ಕಾಡಬಲ್ಲವ ಭಾರೀ ಜಮೀನುದಾರ ಮಾತ್ರ.

ಗ್ರಾಮಾಭಿವೃದ್ದಿಗೆ ಬದ್ಧವಾದ ಕಾಂಗ್ರೆಸ್ ಸರ್ಕಾರ ಇಷ್ಟು ದಿನದ ಮೌನದ ಜೊತೆಗೆ ಇನ್ನೂ ಮೌನವಾಗಿ ಕೂಡದೆ ಪೊಲೀಸರನ್ನು ವಾಪಸ್ ಕರೆಸಲಿ. ರೈತರ ಯೋಗಕ್ಷೇಮದ ರಕ್ಷಣೆಯ ಭರವಸೆ ನೀಡಲಿ. ಅಲ್ಲದೆ ಉದ್ವಿಗ್ನ ವಾತಾವರಣವನ್ನು ಹಾಗೇ ಉರಿಯಲು ಬಿಟ್ಟಲ್ಲಿ ಭಯಂಕರ ಆಸ್ಫೋಟನ ಸಂಭವಿಸುವುದರಲ್ಲಿ ಸಂಶಯವಿಲ್ಲ. ಪರಿಣಾಮವೇನಾದೀತು?ಎಂಬುದನ್ನರಿಯಲು ಸರ್ಕಾರದ ಉನ್ನತ ವಲಯಗಳಲ್ಲಿ ಕಾತುರವೇ ಕಾಣುತ್ತಿಲ್ಲದಿರುವುದು ವಿಷಾದಕರ. ಈವರೆಗೂ ಪರಿಸ್ಥಿತಿಯ ಪರಿಶೀಲನೆಗಾಗಿ ಭೇಟಿ ಕೊಟ್ಟು ಸ್ಥಿತಿಗತಿ ಅರಿಯಲೆತ್ನಿಸುವುದು ಅಗತ್ಯ.



# -: ಪರಾಮರ್ಶನ ಗ್ರಂಥಗಳು :-


| ಕೃತಿಗಳು | ಲೇಖಕರು. |
|---|---|
| 1. ಕಾಗೋಡು ಸತ್ಯಾಗ್ರಹ | :ಜಿ.ರಾಜಶೇಖರ್ |
| 2. ಗೋಪಾಲಗೌಡ ಶಾಂತವೇರಿ ಅಂತರಂಗ ಬಹಿರಂಗ | :ಹೆಚ್.ಸಿ.ವಿಷ್ಣುಮೂರ್ತಿ. |
| 3. ಕಾಗೋಡು ಚಳವಳಿ: ಸುವರ್ಣಸಂಪುಟ | :ಸಂ: ಡಾ.ಹಿ.ಚಿ.ಬೋರಲಿಂಗಯ್ಯ, ಎಸ್.ಹುಚ್ಚಪ್ಪಮಾಸ್ತರ್, |
| 4. ಸಮಾಜವಾದ | :ಸಂ:ಹನುಮಂತ. |
| 5. ಕಾಗೋಡು ಚಳವಳಿ50ವರ್ಷ ಸ್ಮರಣ ಸಂಚಿಕೆ | :ಸಂ: ಎಸ್.ಹುಚ್ಚಪ್ಪಮಾಸ್ತರ್. |
| 6. ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ | :ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| 7. ಮೈಸೂರು ಗೇಣಿದಾರಿ ವ್ಯವಸಾಯ ಭೂಮಿ ಶಾಸನಗಳ ಸಮಿತಿಯ | :ವರದಿ-1957 |
| 8. ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ | :ಪಾಲಾಕ್ಷ |




# ವಿಧಾನ ಮಂಡಲ ಗ್ರಂಥಾಲಯ ಸಮಿತಿ

## 2001 - 2002

ಶ್ರೀ ಯುತರುಗಳಾದ :

| | |
|---|---|
| 1. ಬಿ.ಎಲ್. ಶಂಕರ್ | ವಿಧಾನ ಪರಿಷತ್ತಿನ ಸಭಾಪತಿಯವರು, ಅಧ್ಯಕ್ಷರು |
| 2. ಎಂ.ವಿ. ವೆಂಕಟಪ್ಪ | ವಿಧಾನ ಸಭೆಯ ಅಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. ಬಿ.ಬಿ. ಶಿವಪ್ಪ | ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು |
| 4. ಸುಭಾಷ್ ರುಕ್ಮಯ್ಯ ಗುತ್ತೇದಾರ್ | ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 5. ಚಂದ್ರಕಾಂತ ಗುರಪ್ಪ ಬೆಲ್ಲದ್ | - " - |
| 6. ಉಮೇಶ್ ವಿ. ಕತ್ತಿ | - " - |
| 7. ಕೆ.ಎನ್. ಸುಬ್ಬಾರೆಡ್ಡಿ | - " - |
| 8. ಡಾ॥ ಎಲ್. ಹನುಮಂತಯ್ಯ | ವಿಧಾನಪರಿಷತ್ತಿನ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 9. ಕೆ. ನಿರಂಜನ್ ನಾಯ್ಡು | - " - |
| 10. ಶ್ರೀಮತಿ ನಿರ್ಮಲಾ ವೆಂಕಟೇಶ್ | - " - |

## 2002-2003

ಶ್ರೀಯುತರುಗಳಾದ :

| | | |
|---|---|---|
| 1. | ಬಿ.ಎಲ್. ಶಂಕರ್ | ವಿಧಾನಪರಿಷತ್ತಿನ ಸಭಾಪತಿಯವರು ಹಾಗೂ ಸಮಿತಿಯ ಅಧ್ಯಕ್ಷರು |
| 2. | ಎಂ.ವಿ. ವೆಂಕಟಪ್ಪ | ವಿಧಾನ ಸಭೆಯ ಸಭಾಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. | ಬಿ.ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು ಹಾಗೂ ಉಪ ಸಮಿತಿ ಅಧ್ಯಕ್ಷರು |
| 4. | ಪಿ. ರಮೇಶ್ | ವಿಧಾನ ಸಭಾ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 5. | ಡಾ. ಭಾರತಿ ಶಂಕರ್ | - " - |
| 6. | ಡಿ.ಆರ್. ಪಾಟೀಲ್ | - " - |
| 7. | ಕೆ.ಬಿ. ಚಂದ್ರಶೇಖರ್ | - " - |
| 8. | ರಾಮಚಂದ್ರೇಗೌಡ | ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 9. | ಡಾ. ಎಂ.ಪಿ. ನಾಡಗೌಡ | - " - |
| 10. | ಎಂ.ಎಸ್. ಸಿದ್ದರಾಜು | - " - |

## 2003-2004

ಶ್ರೀಯುತರುಗಳಾದ:

| | | |
|---|---|---|
| 1. | ಬಿ.ಎಲ್. ಶಂಕರ್ | ವಿಧಾನಪರಿಷತ್ತಿನ ಸಭಾಪತಿಯವರು ಹಾಗೂ ಸಮಿತಿಯ ಅಧ್ಯಕ್ಷರು |
| 2. | ಎಂ.ವಿ. ವೆಂಕಟಪ್ಪ | ವಿಧಾನ ಸಭೆಯ ಸಭಾಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. | ಬಿ.ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು ಹಾಗೂ ಉಪಸಮಿತಿ ಅಧ್ಯಕ್ಷರು ಹಾಗೂ ಸಮಿತಿಯ ಸದಸ್ಯರು |
| 4. | ಎಸ್.ಕೆ. ಬೆಳ್ಳುಬ್ಬಿ | ವಿಧಾನ ಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 5. | ಬಿ.ಜಿ. ಗೋವಿಂದಪ್ಪ | - " - |
| 6. | ಷಡಾಕ್ಷರಿ ಕೆ. | - " - |
| 7. | ಗೋಪಾಲಕೃಷ್ಣ ಎನ್.ವೈ. | - " - |
| 8. | ಯಡಿಯೂರಪ್ಪ ಬಿ.ಎಸ್ | ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 9. | ಡಾ. ಎಂ.ಪಿ. ನಾಡಗೌಡ | - " - |
| 10. | ಖೋತ ಸಚ್ಚಿದಾನಂದ | - " - |

# 2004-2005

ಶ್ರೀಯುತರುಗಳಾದ :

| | | |
|---|---|---|
| 1. | ವಿ.ಆರ್. ಸುದರ್ಶನ್<br>ಸಭಾಪತಿಗಳು,<br>ಕರ್ನಾಟಕ ವಿಧಾನ ಪರಿಷತ್ತು | ಅಧ್ಯಕ್ಷರು |
| 2. | ಕೃಷ್ಣ<br>ಸಭಾಧ್ಯಕ್ಷರು,<br>ಕರ್ನಾಟಕ ವಿಧಾನ ಸಭೆ | ಸದಸ್ಯರು |
| 3. | ವಿಶ್ವನಾಥ್ ಪಾಟೀಲ್ ಹೆಬ್ಬಾಳ್<br>ವಿಧಾನ ಸಭಾ ಸದಸ್ಯರು ಹಾಗೂ<br>ಉಪ ಸಮಿತಿಯ ಅಧ್ಯಕ್ಷರು | ಸದಸ್ಯರು |
| 4. | ಜಿ.ಎಸ್. ಗಡ್ಡದೇವರ ಮಠ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 5. | ಆರ್. ಧ್ರುವನಾರಾಯಣ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 6. | ಕಳಕಪ್ಪ ಜಿ. ಬಂಡಿ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 7. | ಡಾ. ವೀರಬಸವಂತರೆಡ್ಡಿ ಮುದ್ನಾಳ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 8. | ಡಾ. ವಿ.ಎಸ್. ಆಚಾರ್ಯ (ದಿನಾಂಕ 26.11.04ರವರೆಗೆ)<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 9. | ಡಾ. ಎಲ್. ಹನುಮಂತಯ್ಯ (ದಿನಾಂಕ 26.11.04ರವರೆಗೆ)<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 10. | ಡಾ. ಚಂದ್ರಶೇಖರ ಬಿ. ಕಂಬಾರ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 11. | ವಿಠಲ ಹೆರೂರು (ದಿನಾಂಕ 26.11.04 ರಿಂದ )<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 12. | ಖಾಜಿ಼ ಅರಶದ ಅಲಿ (ದಿನಾಂಕ 26.11.04 ರಿಂದ )<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

## ಸಂಪಾದಕ ವರ್ಗ

## ಕರ್ನಾಟಕ ವಿಧಾನ ಸಭೆ ಸಚಿವಾಲಯ

ಶ್ರೀಯುತರುಗಳಾದ :

| | | |
|---|---|---|
| 1. | ಟಿ. ರಾಜಣ್ಣ | ಕಾರ್ಯದರ್ಶಿ |
| 2. | ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| 3. | ಟಿ.ಎನ್. ಧ್ರುವಕುಮಾರ್ | ಜಂಟಿ ಕಾರ್ಯದರ್ಶಿ |
| 4. | ಕೆ.ಎನ್. ಪ್ರಭಾಕರ್‌ರಾವ್ | ಜಂಟಿ ಕಾರ್ಯದರ್ಶಿ (ಪ್ರ) |
| 5. | ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| 6. | ಕೆ. ಚಿನ್ನಸ್ವಾಮಿ | ಉಪ ಕಾರ್ಯದರ್ಶಿ |
| 7. | ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| 8. | ಹೆಚ್.ಎಸ್. ಜಗನ್ನಾಥ್ | ಅಧೀನ ಕಾರ್ಯದರ್ಶಿ |
| 9. | ಎ. ರಂಗಸ್ವಾಮಿ | ಶಾಖಾಧಿಕಾರಿ |
| 10. | ಅನಸೂಯ ಎನ್. ದೇವಗಿರಿ | ಸಹಾಯಕ ಗ್ರಂಥಪಾಲಕಿ |

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

ಶ್ರೀಯುತರುಗಳಾದ :

| | | |
|---|---|---|
| 1. | ಕೆ. ಜಯಶಂಕರಮೂರ್ತಿ | ಕಾರ್ಯದರ್ಶಿ (ಪ್ರ) |
| 2. | ವಿ. ಶ್ರೀಶ್ | ಸಭಾಪತಿಯವರ ಕಾರ್ಯದರ್ಶಿ |

## ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆಯಡಿಯಲ್ಲಿ ಬಿಡುಗಡೆಗೊಂಡಿರುವ ಪುಸ್ತಕಗಳು

| | ಪುಸ್ತಕಗಳು | ದರ ರೂ. |
|---|---|---|
| 1. | ಕೆ. ಹನುಮಂತಯ್ಯ | 20.00 |
| 2. | ಎಸ್. ನಿಜಲಿಂಗಪ್ಪ | 15.00 |
| 3. | ಶಾಂತವೇರಿ ಗೋಪಾಲಗೌಡ | 15.00 |
| 4. | ವೈಕುಂಠ ಬಾಳಿಗಾ | 20.00 |
| 5. | ವೀರೇಂದ್ರ ಪಾಟೀಲ್ | 20.00 |
| 6. | ಕಡಿದಾಳ್ ಮಂಜಪ್ಪ | 15.00 |
| 7. | ಜಿ.ವಿ. ಹಳ್ಳಿಕೇರಿ | 15.00 |
| 8. | ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 15.00 |
| 9. | ಡಿ. ದೇವರಾಜ ಅರಸು | 15.00 |
| 10. | ಕೆ.ಟಿ. ಭಾಷ್ಯಂ | 15.00 |
| 11. | ಟಿ.ಸಿದ್ದಲಿಂಗಯ್ಯ | 20.00 |
| 12. | ಕೆ. ಪುಟ್ಟಸ್ವಾಮಿ | 15.00 |
| 13. | ಜಗಳೂರು ಇಮಾಂ | 15.00 |
| 14. | ಕೆ.ಸಿ. ರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | 20.00 |
| 16. | ಜೆ.ಬಿ. ಮಲ್ಲಾರಾಧ್ಯ | 15.00 |
| 17. | ಹೆಚ್.ಎಂ. ಚನ್ನ ಬಸಪ್ಪ | 20.00 |
| 18. | ಎಂ. ನಾಗಪ್ಪ | 15.00 |
| 19. | ಬಿ. ರಾಚಯ್ಯ | 20.00 |
| 20. | ಗಂಗಾಧರ ನಮೋಶಿ | 15.00 |

| ಪುಸ್ತಕಗಳು | ದರ ರೂ. |
|---|---|
| 21. ಬಿ.ಡಿ. ಜತ್ತಿ | 15.00 |
| 22. ಆರ್. ಗುಂಡೂರಾವ್ | 20.00 |
| 23. ಕೆ.ಎಚ್. ಪಾಟೀಲ್ | 15.00 |
| 24. ಅಜೀಜ್ ಸೇಠ್ | 15.00 |
| 25. ಸಿ.ಎಂ. ಆರ್ಮುಗಂ | 15.00 |
| 26. ಎಸ್.ಡಿ. ಗಾಂವಕರ್ | 20.00 |
| 27. ಶ್ರೀಮತಿ ಬಿ.ಎಲ್. ಸುಬ್ಬಮ್ಮ | 15.00 |
| 28. ಟಿ.ಆರ್. ಶಾಮಣ್ಣ | 20.00 |
| 29. ಜೆ.ಹೆಚ್. ಪಾಟೀಲ್ | 30.00 |

ಭಾಷಾಂತರ ಪುಸ್ತಕಗಳು

| | |
|---|---|
| 1. ಡಾ: ಬಿ.ಆರ್. ಅಂಬೇಡ್ಕರ್ | 20.00 |
| 2. ಡಾ: ರಾಮ ಮನೋಹರ ಲೋಹಿಯಾ | 15.00 |
| 3. ವಿ.ಕೆ. ಕೃಷ್ಣಮೆನನ್ | 20.00 |
| 4. ಡಾ: ಶ್ಯಾಂಪ್ರಸಾದ್ ಮುಖರ್ಜಿ | 20.00 |
| 5. ಶೇಖ್ ಮಹಮದ್ ಅಬ್ದುಲ್ಲಾ | 15.00 |
| 6. ಡಾ: ರಾಜೇಂದ್ರ ಪ್ರಸಾದ್ | 20.00 |
| 7. ಭೂಪೇಶ್ ಗುಪ್ತಾ | 20.00 |
| 8. ಅನಂತಶಯನಂ ಅಯ್ಯಂಗಾರ್ | 20.00 |
| 9. ಶ್ರೀಮತಿ ರಾಜಕುಮಾರಿ ಅಮೃತ್ ಕೌರ್ | 20.00 |
| 10. ಡಾ: ಚಿಂತಾಮನ್ ಡಿ. ದೇಶ್‌ಮುಖ್ | 20.00 |
| 11. ಪನಂಪಿಲ್ಲಿ ಗೋವಿಂದ ಮೆನನ್ | 15.00 |
| 12. ಜೈ ಸುಖಲಾಲ್ ಹಾಥಿ | 15.00 |
| 13. ಎಸ್.ಎಂ. ಜೋಷಿ | 15.00 |
| 14. ಡಾ. ಲಂಕಾ ಸುಂದರಂ | 15.00 |